ಶ್ರೀಮದ್ವಿಶಿಷ್ಟಾದ್ವೈತ ಸಿದ್ಧಾಂತ ರತ್ನಮಾಲಾ

ದ್ವಿತೀಯರತ್ನವು—ಪ್ರಥಮಸಂಚಿಕೆ

ಶ್ರೀಮನ್ನಿಗಮಾಂತಮಹಾದೇಶಿಕಪ್ರಣೀತ

ಶ್ರೀಮದ್ರಹಸ್ಯತ್ರಯಸಾರದ

# ಗುರುಪರಂಪರಾಸಾರವು

---

ವಿದ್ಯಾಭ್ಯಾಸದ ಇಲಾಖಾ ರಿಟೈರ್ಡ್ ಸರ್ಕಲ್ ಇನ್ಸ್‌ಪೆಕ್ಟರ್

**ಸಿ. ಯಂ. ವಿಜಯರಾಘವಾಚಾರ್ಯರಿಂದ**

ರಚಿಸಲ್ಪಟ್ಟ

ಆಚಾರ್ಯಹೃದಯಾನ್ವೇಷಿಣೀ

ಎಂಬ ಕನ್ನಡ ಭಾಷಾಂತರ ತಾತ್ಪರ್ಯಗಳೂ ಸಹ

---

ಕಾಪೀಪಿರೈಟು ರಿಜಿಸ್ಟರು ಮಾಡಲ್ಪಟ್ಟಿರುತ್ತದೆ

ಬೆಂಗಳೂರು ಸಿಟಿ

1925

**ಕ್ರಯ ೧೨ ಅಣೆಗಳು**

ಶ್ರೀಮತೇ ರಾಮಾನುಜಾಯನಮಃ
ಶ್ರೀಮತೇ ನಿಗಮಾಂತಮಹಾದೇಶಿಕಾಯನಮಃ
ಶ್ರೀಮತೇ ಶ್ರೀನಿವಾಸಮಹಾದೇಶಿಕಾಯನಮಃ

ಗುರುರೇವ ಪರಂಬ್ರಹ್ಮ ಗುರುರೇವ ಪರಾಗತಿಃ |
ಗುರುರೇವ ಪರಾವಿದ್ಯಾ ಗುರುರೇವ ಪರಾಯಣಂ ||
ಗುರುರೇವಪರಃಕಾಮಃ ಗುರುರೇವ ಪರಂಧನಂ |
ಯಸ್ಮಾತ್ತದುಪದೇಷ್ಟಾಸೌ ತಸ್ಮಾದ್ಗುರುತರೋ ಗುರುಃ ||

ಎಂಬ ಅಮೋಘೋಕ್ತ್ಯನುಸಾರವಾಗಿ, "ದೇಶಿಕೋ ಮೇ ದಯಾಳುಃ" ಎಂಬದಾಗಿ ಶ್ರೀನಿಗಮಾಂತದೇಶಿಕರವರು ಅಪ್ಪಣೆಕೊಡಿಸಿರುವ ಹಾಗೆ ಪರಮೋದಾರ ಭಾವದಿಂದ ಈ ಚೇತನನಿಗೆ ಮಾಡಿದ ಮಹೋಪಕಾರಕ್ಕೆ ಕೃತಜ್ಞತಾ ಸೂಚಕವಾಗಿ ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾಚಾರ್ಯರಾದ,
ಪರಮಹಂಸ ಪರಿವ್ರಾಜಕಾಚಾರ್ಯರಾದ,
ಸರ್ವತಂತ್ರ ಸ್ವಂತಂತ್ರೋಭಯ ವೇದಾಂತಾಚಾರ್ಯರಾದ,
ಭಗವದ್ರಾಮಾನುಜ ಸಿದ್ಧಾಂತ ನಿರ್ಧಾರಣಸಾರ್ವಭೌಮರಾದ,
ಶ್ರೀಮನ್ನಾಥಮುನಿ, ಶ್ರೀಮದ್ಯಾಮುನಮುನಿ, ಶ್ರೀಮದ್ರಾಮಾನುಜ ಮುನಿ
ಮುನಿತ್ರಯರೂಪ ಸಿದ್ಧಾಂತಸ್ಥಾಪನಾಚಾರ್ಯರಾದ,
ಶ್ರೀಮನ್ನಾರಾಯಣಾರ್ಯ ಮಹಾದೇಶಿಕ ಕಟಾಕ್ಷಲಬ್ಧಸಾರ್ವಜ್ಞರಾದ,

## ಶ್ರೀ ಶ್ರೀನಿವಾಸ ಮಹಾದೇಶಿಕರವರ

ದಿವ್ಯಚರಣಾರವಿಂದಗಳಲ್ಲಿ ಈ ಗುರುಪರಂಪರಾಸಾರ ವ್ಯಾಖ್ಯಾರೂಪಕೃತಿಯು ಈ ಶ್ರೀನಿವಾಸ ಮುನಿವರ್ಯರವರಿಗೆ ಶ್ರೀನಿಗಮಾಂತ ದೇಶಿಕರವರಲ್ಲಿರುವ ನಿರತಿಶಯ ಭಕ್ತಿಯನ್ನು ನೋಡಿ, ಶ್ರೀನಿಗಮಾಂತದೇಶಿಕರವರ ದಿವ್ಯಸೂಕ್ತಿಗಳನ್ನು ಪ್ರಚುರಗೊಳಿಸುವದೇ ಸ್ವಾಮಿಯವರಿಗೆ ಪ್ರಿಯತಮವಾದ ಕೈಂಕರ್ಯವೆಂದು ಭಾವಿಸಿ ಸಮರ್ಪಿಸಲ್ಪಟ್ಟಿರುತ್ತದೆ.

ತಿರುವಡಿದಾಸರ್

**ಚುಂಚನಕಟ್ಟೆ ಮೇಲುಕೋಟೆ ವಿಜಯರಾಘವತವರ್,**
**ರಿಟೈರ್ಡ್ ಸರ್ಕಲ್ ಇನ್ಸ್ಪೆಕ್ಟರ್, ಬೆಂಗಳೂರು ಸಿಟಿ.**

# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 7 | 18 | ಉತ್ಥಾ?ೋಶಾಯ | ಉತ್ಥಾಯೋತ್ಥಾಯ |
| 7 | 23 | ನಮಃ | ನಮೋನಮಃ |
| 10, 12 14, 16 | 1 | ತ್ರಯಸಾರ್ | ತ್ರಯಸಾರೆ |
| 28 | 14 | ಸಹಸ್ರಾಣಾ | ಸಹಸ್ರಾಣಾಂ |
| 30 | 4 | ಭಗವತ್ಪ್ರಪತ್ತಿ | ಭಗವತ್ಪ್ರತಿಪತ್ತಿ |
| 30 | 4 | ಭಾಗವತಪ್ರಪತ್ತಿ | ಭಾಗವತಪ್ರತಿಪತ್ತಿ |
| 31 | 1 | ಶ್ಲೋಕಗಳಿಂದ | ಶ್ಲೋಕಗಳಾದ |
| 32 | 20 | ಹೇಳಿ | ಹೇಳಿದರೆಂದು |
| 35 | 1 | ಕಂಡ | ಕಂಡು |
| 40 | 21 | .... | ಮಧುರಕವಿಯಾಳ್ವಾರವರ ಆಚಾರ್ಯನಿಷ್ಠೆಯನ್ನು ಕೊಂಡಾಡುತ್ತಾರೆಂಬು ದುಬಿಟ್ಟುಹೋಗಿರುತ್ತದೆ |
| 47 | 25 | ಆಚಾರ್ಯರಾದರೂ | ಆಚಾರ್ಯರಾದರೋ |
| 63 | 20 | ಶಾಚೀನ | ಶೌಚೀನ |
| 64 | 14 | ಮತ್ನಾರ್ಕ | ಮಗ್ನಾರ್ಕ |
| 66 | 1 | ಪರಾಯಣಃ | ಪರಾಯಣಾಃ |
| 77 | 3 | ಆಳ್ವಾರವರು | ಆಳ್ವಾರವರೂ ಮತ್ತು ನಮ್ಮಾಳ್ವಾರವರೂ |
| 94 | 2 | ಕ್ಷೀಯತೇ | ಕ್ಷೀಯೇತೆ |
| 95 | 10 | ಕ್ಷೀಯತೆ | ಕ್ಷೀಯೇತೆ |
| 97 | 3 | ಕಡುಗ | 1 ಕಡುಗ |
| 97 | 5 | 1 ರೈಕ್ವಾದಿ | ರೈಕ್ವಾದಿ |
| 99 | 8 | ಗೋಗಳು | ಗೋವುಗಳು |
| 111 | 9 | ಕೃಪೋದಾರ್ಯ | ಕೃಪೌದಾರ್ಯ |
| 121 | 20 | ನಿರಪನವು | ನಿರಸನವು |
| [illegible] | 24 | ಳವಂದಾರ್ | ಆಳವಂದಾರ್ |
| [illegible] | 3 | ತವಜಾರ್ಜುನ | ತವಜಾರ್ಜುನ |
| [illegible] | 23 | ಮತದ | ಮತ್ತು |
| [illegible] | 24 | [illegible] | ಮಾಡಿದ |
| [illegible] | 20 | [illegible] | ಅವರಿಗೆ |

# ವಿಜ್ಞಾಪನಾ.

ಈ ಅನೋಘವಾದ ಶ್ರೀಮದ್ರಹಸ್ಯತ್ರಯಸಾರಕ್ಕೆ ಆಚಾರ್ಯಹೃದಯಾನ್ವೇಷಿಣೀ ಎಂಬ ಕನ್ನಡ ಅರ್ಥತಾತ್ಪರ್ಯಗಳನ್ನು ಬರೆಯುವದರಲ್ಲಿ ದಾಸನಿಗೆ ಎರಡು ಅಭಿಪ್ರಾಯಗಳುಂಟು—

ಒಂದನೇದು—ಸಂಸ್ಕೃತ, ತಮಿಳ್ ಭಾಷೆಗಳಲ್ಲಿ ಪರಿಶ್ರಮವಿಲ್ಲದ ಶ್ರೀವೈಷ್ಣವ ಮಂಡಲಿಯು ಇಂತಹ ಸರ್ವಶಾಸ್ತ್ರಸಾರಭೂತವಾದ ಗ್ರಂಥಸ್ವಾರಸ್ಯವೆಂಬ ಅಮೃತಪಾನಮಾಡದೆಯೂ ಅದರಿಂದುಂಟಾಗುವ ಶ್ರೇಯಸ್ಸಿಗೆ ಭಾಗಿಗಳಾಗದೆಯೂ ಇರುತ್ತಾರಲ್ಲಾ ಎಂಬ ಪರಿತಾಪದಿಂದ ಅಂಥಾವರಿಗೂ ಉಪಕಾರಕವಾಗಿ ಅವರೂ ಶಾಸ್ತ್ರಜ್ಞಾನವನ್ನು ಹೊಂದಲಿ ಎಂಬುದು.

ಎರಡನೇದು—ನಮ್ಮ ಸ್ತ್ರೀಯರುಗಳು ಇಂತಹ ಶಾಸ್ತ್ರಜ್ಞಾನಪರಿಚಯವೇ ಇಲ್ಲದೆ, ಹೀನಸ್ಥಿತಿಯಲ್ಲಿರುವದು ಯುಕ್ತವಲ್ಲವಾದುದರಿಂದ, ಅವರು ವ್ಯರ್ಥ ಕಾಲಕ್ಷೇಪವನ್ನು ತ್ಯಜಿಸಿ, ಆತ್ಮೋಜ್ಜೀವನಕ್ಕೆ ಬೇಕಾದ ಜ್ಞಾನವನ್ನು ಸಂಪಾದಿಸಿಕೊಳ್ಳಲಿ ಎಂಬುದು.

ಈ ಎರಡು ಕೋರಿಕೆಗಳೂ ಪೂರ್ಣವಾದುವಾದರೆ ದಾಸನ ಈ ಆಚಾರ್ಯಸೂಕ್ತಿಯನ್ನು ಪ್ರಚುರಗೊಳಿಸುವ ಕೈಂಕರ್ಯವು ಸಾರ್ಥಕ್ಯವನ್ನು ಹೊಂದಿತೆಂದು ಭಾವಿಸುವೆನು.

ಅಲ್ಪಾಸ್ಥಿರಫಲಪ್ರದಗಳಾದ ಐಹಿಕವ್ಯಾಪಾರಗಳಲ್ಲೇ ಮಗ್ನರಾಗಿ ಕಾಲವನ್ನೆಲ್ಲಾ ಕಳೆಯುವದರೊಂದಿಗೆ, ಇದ್ದಿದ್ದರಲ್ಲೇ ಸ್ವಲ್ಪ ಅವಕಾಶವನ್ನು ಮಾಡಿಕೊಂಡು ಪ್ರತಿದಿನದಲ್ಲೂ ಒಂದು ಅರ್ಧಘಂಟೆಯ ಕಾಲವನ್ನಾದರೂ ಕೊಟ್ಟು, ಇಂತಹ ಸಚ್ಛಾಸ್ತ್ರಗಳ ಸಾರತಮಭಾಗಗಳ ಉಪಪಾದನರೂಪವಾದ ಆಚಾರ್ಯಸೂಕ್ತಿಗಳನ್ನು ಅರ್ಥದೊಂದಿಗೆ ಪಠನಮಾಡುವದೂ ಆದರಂತೆ ಅನುಷ್ಠಾನವೂ ಪರಮಪುರುಷಾರ್ಥದಾಯಕವು.

ಶ್ರೀಮದಾಚಾರ್ಯವರ್ಯರ ಸೂಕ್ತಿಯ ಭಾಷಾಂತರ ಭಾಗವನ್ನು ಬ್ರಾಕೆಟ್ಟುಗಳಿಲ್ಲದೆ ಮುದ್ರಿಸಿರುತ್ತದೆ. ಆಚಾರ್ಯಾನುಗ್ರಹದಿಂದ ಬರದ ತಾತ್ಪರ್ಯ ಉಪಪಾದನಭಾಗಗಳು ಬ್ರಾಕೆಟ್ಟುಗಳಲ್ಲಿರುವ ಹಾಗೆ ಮುದ್ರಿಸಿರುತ್ತದೆ.

ಇದರಲ್ಲಿ ಅನೇಕ ಲೋಪಗಳೂ ಸ್ಖಾಲಿತ್ಯಗಳೂ ಇರಬಹುದು. "ಹಂಸೋ ಯಥಾಕ್ಷೀರಮಿವಾಂಬುಮಿಶ್ರಂ" ಎಂದು ಹೇಳಿರುವಹಾಗೆ, ಅವುಗಳನ್ನು ಪರಿಗಣಿ

ಸದೆ ಸ್ವಾಮಿನಿಗಮಾಂತಮಹಾದೇಶಿಕರವರ ದಿವ್ಯಸೂಕ್ತಿಯಾಗಿ ಸಾರತಮಭಾಗ ಗಳನ್ನೊಳಗೊಂಡಿರುವದರಿಂದ ಸಾಧುಜನಗಳು ಪರಮಾದರದಿಂದ ಇದನ್ನು ಪರಿಗ್ರಹಿಸಲಿ ಎಂಬ ಪ್ರಾರ್ಥನೆಯು. ಹಾಗೆ ಭಾಗವತರು ಪರಿಗ್ರಹಿಸಿದರೇನೇ, ಈ ಕೈಂಕರ್ಯದಿಂದ "ಪ್ರೀಯತಾಂ ವಾಸುದೇವಃ" ಎಂಬ ನನ್ನ ಮನೋರಥವು ಸಫಲ ವಾದುದಾಗುತ್ತದೆ.

ಈ ಗ್ರಂಥಕಾಲಕ್ಷೇಪೋಕ್ರಮರೂಪವಾದ ಅನುಗ್ರಹವು ದಾಸನಿಗೆ ಅರಮನೆ ಮಹಾವಿದ್ವಾನರಾಗಿಯೂ ತಾರ್ಕಿಕಶಿಖಾಮಣಿಯಾಗಿಯೂ ಆದ ಉಭಯ ವೇದಾಂತಪ್ರವರ್ತಕರಾದ ಶ್ರೀಮಾನ್ ನುಗ್ಗೆಹಳ್ಳಿ ತಿರುಮಲಾಚಾರ್ಯರವರಿಂದ ದೊರೆತು, ಆ ಅನುಗ್ರಹವು ಈರೀತಿಯಾಗಿ ಮೂರ್ತೀಭವಿಸಿ ಗ್ರಂಥರೂಪವನ್ನು ತಾಳಿದುದರಿಂದ, ಈ ಮಹಾನುಭಾವರಿಗೆ ದಂಡವತ್ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಈ ಗ್ರಂಥರಚನೆಯಲ್ಲಿ ಬೆಂಗಳೂರು ಕೊಲಿಜಿಯೇಟ್ ಹೈಸ್ಕೂಲ್ ಸಂಸ್ಕೃತ ಪಂಡಿತರಾದ ಉ|| ವೇ|| ಶ್ರೀಮಾನ್ ಹೆಮ್ಮಿಗೆ ಶ್ರೀನಿವಾಸೈಯ್ಯಂಗಾರ್ರವರು ತುಂಬಾ ಸಹಾಯಮಾಡಿ ಶ್ರಮವನ್ನು ವಹಿಸಿ ಪ್ರೂಫುಗಳನ್ನು ಪರಿಷ್ಕರಿಸಿದುದಕ್ಕಾಗಿ ಅವರಿಗೆ ಪ್ರಣಾಮಪೂರ್ವಕ ವಂದನೆಗಳನ್ನು ಸಮರ್ಪಿಸುತ್ತೇನೆ.

ಮುಂದಕ್ಕೆ "ಉಪೋದ್ಘಾತಾಧಿಕಾರ" ಮತ್ತು "ಸಾರನಿಷ್ಕರ್ಷಾಧಿಕಾರ ಗಳನ್ನು" ಒಟ್ಟಿಗೆ ಸೇರಿಸಿ, ಅರ್ಥತಾತ್ಪರ್ಯಗಳೊಂದಿಗೆ, ಮುದ್ರಿಸಿ ಕಳುಹಿಸಲ್ಪಡುತ್ತದೆ. ಪ್ರತಿಗಳನ್ನಪೇಕ್ಷಿಸುವವರು ಮುಂದಾಗಿ ತಿಳಿಸಿದರೆ ಪ್ರತಿಗಳು ಸಿದ್ಧವಾದ ಒಡನೆಯೇ ಕಳುಹಿಸಲ್ಪಡುತ್ತವೆ. ವಿ. ಪಿ. ಮೂಲಕ ಪುಸ್ತಕಗಳನ್ನು ಪಡೆಯುವದು ತುಂಬಾ ನಷ್ಟವಾದುದರಿಂದ ಮುಂಗಡವಾಗಿ ಮೂರು ರೂಪಾಯಿ ಗಳನ್ನು ಕಳುಹಿಸಿದರೆ ಲೆಕ್ಕವಿಟ್ಟು, ಪ್ರತಿಗಳು ಸಿದ್ಧವಾದ ಹಾಗೆಲ್ಲಾ ಕಳುಹಿಸಲ್ಪಡುವುವು. ಚಂದಾಮುಗಿದ ನಂತರ ಪತ್ರಮುಖೇನ ವಿಜ್ಞಾಪಿಸಿಕೊಳ್ಳುವೆನು.

ಶ್ರೀಕೃಷ್ಣಾರ್ಪಣಮಸ್ತು.

ಸಿ. ಯಮ್. ವಿಜಯರಾಘವ ಶರ್ಮ್ಮಾ,
ರಿಟೈರ್ಡ್ ಸರ್ಕಲ್ ಇನ್ಸ್ಪೆಕ್ಟರ್, ಬಸವನಗುಡಿ.

ಬೆಂಗಳೂರು,

1-12-1926

ಶ್ರೀ ಸೀತಾರಾಮಾಯನಮಃ,





**ಶ್ರೀಮತೇ ರಾಮಾನುಜಾಯನಮಃ.**

ಶ್ರೀ ಮತೆ ನಿಗಮಾಂತ ಮಹಾದೇಶಿಕಾಯನಮಃ.

ಶ್ರೀಮತೆ ಶ್ರೀನಿವಾಸ ಮಹಾದೇಶಿಕಾಯನಮಃ

# ಶ್ರೀಮದ್ರಹಸ್ಯತ್ರಯಸಾರಂ.

ಶ್ರೀ ನಾರಾಯಣ ಯೋಗೀಂದ್ರ ವರದಾರ್ಯ ಕೃಪಾಶ್ರಯಂ ।
ರಂಗೇಶಪಾದವಿನತಂ ಶ್ರೀನಿವಾಸಮುನಿಂ ಭಜೆ ॥
ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕಕೇಸರೀ ।
ವೇದಾಂತಾಚಾರ್ಯವರ್ಯೋ ಮೆ ಸನ್ನಿಧತ್ತಾಂ ಸದಾಹೃದಿ ॥

ಅಖಿಲಹೇಯ ಪ್ರತ್ಯನೀಕನಾಗಿಯೂ ಅನಂತ ಕಲ್ಯಾಣ ಗುಣಗಣ ಮಹೋದಧಿಯಾಗಿಯೂ ಇರುವ ಶ್ರಿಯಃಪತಿಯು, ತನ್ನ ನಿರತಿಶಯ ಕೃಪೋದಾರ ಭಾವಗಳಿಂದ ಈ ಜಗತ್ತಿನ ಜೀವಕೋಟಿಯು ಉಜ್ಜೀವಿಸಲಿ ಎಂಬ ಸತ್ಯ ಸಂಕಲ್ಪದಿಂದ ಪೆರಿಯಾಳ್ವಾರ್, ನಮ್ಮಾಳ್ವಾರ್ ಮೊದಲಾದ ಆಳ್ವಾರುಗಳನ್ನೂ, ಶ್ರೀಮನ್ನಾಥಮುನಿ, ಆಳವಂದಾರ್, ಯತಿರಾಜರಾದ ಮುನಿತ್ರಯರನ್ನೂ, ಅವರುಗಳ ಶಿಷ್ಯ ಪ್ರಶಿಷ್ಯರುಗಳು ಮುಂತಾದ ಆಚಾರ್ಯ ಪರಂಪರೆಗಳನ್ನೂ, ಈ ಭರತಖಂಡದಲ್ಲಿ ಅವತರಿಸುವಹಾಗೆ ಮಾಡಿದನು. ಇವರುಗಳೆಲ್ಲಾ ಅನುಗ್ರಹಿಸಿದ ಸಮ್ಮ ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದನಾರೂಪವಾದ ದಿವ್ಯಸೂಕ್ತಿಗಳನ್ನೆಲ್ಲಾ ಸ್ಥಿರೀಕರಿಸಿ ಶ್ರೀ ಭಾಷ್ಯಕಾರ ಸಿದ್ಧಾಂತವು ಚನ್ನಾಗಿ ಪ್ರಕಾಶಿಸುವ ಹಾಗೆ ಮಾಡುವದಕ್ಕೋಸ್ಕರ ಸ್ವಾಮಿ ಶ್ರೀನಿವಾಸನು ತನ್ನ ಘಂಟಾರೂಪದಲ್ಲಿರುವ ದಿವ್ಯಸೂರಿಗಳನ್ನು "ತೂಪ್ಪಿಲ್ ಪಿಳ್ಳೈ" ಯಾದ ವೇದಾಂತ ದೇಶಿಕರಾಗಿ ಅವತರಿಸುವ ಹಾಗೆ ಮಾಡಿ ಅವರಿಗೆ ದಿವ್ಯ ಚಕ್ಷುಸ್ಸು ಜ್ಞಾನ ಮೊದಲಾದವುಗಳನ್ನು ಕೃಪೆಗೈದು, ಪೂರಾ

ಚಾರ್ಯರುಗಳೆಲ್ಲಾ ಅನುಗ್ರಹಿಸಿದ ವಿಷಯಗಳನ್ನೆಲ್ಲಾ ವಿಶದೀಕರಿಸಿ ವಿಚಿತ್ರವಾದ ಕವಿತಾ ಶಕ್ತಿ ಮೂಲಕ ಗ್ರಂಥಗಳನ್ನು ರಚಿಸಿ ೧೦೫೪ ವರುಷಕಾಲ ಶಾಸ್ತ್ರಜ್ಞಾನ ಪ್ರಕಾಶವನ್ನುಂಟುಮಾಡುವಹಾಗೆ ದಯ ಪಾಲಿಸಿದನು. ಆ ಗ್ರಂಥಗಳಲ್ಲಿ ಮುಖ್ಯವಾದುದು, ಮುಮುಕ್ಷುವಾದವನು ಪರಮಾದರದಿಂದ ಗ್ರಹಿಸಬೇಕಾಗಿ, ಸಾರತಮ ವಿಷಯಗಳನ್ನೆಲ್ಲಾ ಒಳಗೊಂಡಿರುವ ಶ್ರೀಮದ್ರಹಸ್ಯತ್ರಯಸಾರವೆಂಬ ಈ ಅಮೋಘವಾದ ಪ್ರಬಂಧವಾಗಿರುತ್ತದೆ. ಇಂತಹ ಪರಮೋಪಕಾರಕರಾದ ಈ ಆಚಾರ್ಯವರ್ಯರ ವಿಷಯದಲ್ಲಿ ಕೃತಜ್ಞತಾಪೂರ್ವಕ ಗುರುಭಕ್ತಿಯು ಅನೇಕರಿಗಿರುವುದು ಅತಿಶಯವಾದುದೇನೂ ಅಲ್ಲವು. ಇಂತಹ ಸಾರತಮವಾದ ವಿಷಯವು ಸ್ತ್ರೀಮೊದಲಾಗಿ ಸರ್ವರಿಗೂ ಉಪಕಾರಕವಾಗಿರಲಿ ಎಂಬ ಪರಮ ಕೃಪೆಯಿಂದ ತಮಿಳ್ ಭಾಷೆಯಲ್ಲಿಯೇ ಬರದಿರುತ್ತಾರೆ. ಇದರಲ್ಲಿ ಮೊದಲಿರುವ ಗುರು ಪರಂಪರಾ ಸಾರವಲ್ಲದೆ ೩೨ ಅಧಿಕಾರಗಳುಂಟು. ತಾವು ಬರದಿರುವ ಈ ಗ್ರಂಥರತ್ನವು ಶ್ರುತಿ ಸ್ಮೃತಿ ಪುರಾಣೇತಿಹಾಸ ಭಗವಚ್ಛಾಸ್ತ್ರ ವ್ಯಾಸ ಸೂತ್ರಾದಿ ಪ್ರಮಾಣಗಳನ್ನನುಸರಿಸಿಯೇ ಇರುತ್ತದೆಂಬುವದನ್ನು ಸ್ಥಾಪಿಸುವದಕ್ಕಾಗಿ ಅಂತಹ ಪ್ರಮಾಣಗಳನ್ನು ಪ್ರತಿ ಸಂದರ್ಭದಲ್ಲೂ ವಿಪುಳವಾಗಿ ಉದಾಹರಿಸಿರುತ್ತಾರೆ. ಇದರಲ್ಲಿ ಮುಖ್ಯವಾಗಿ ಉಪಪಾದಿತವಾಗಿರುವದು ಸರ್ವ ಶಾಸ್ತ್ರ ಸಮ್ಮತವಾದ ಮೋಕ್ಷೋಪಾಯವು. ಈ ಗ್ರಂಥದ ಸಾರಾಂಶ ವೇನಂದರೆ:—ಚೇತನನಿಗೆ ಈಶ್ವರ ಕೃಪೆಯಿಂದ ಕರ್ಮ ಪರಿಪಾಕ ಉಂಟಾಗುವ ಕಾಲದಲ್ಲಿ ಜ್ಞಾನವಿಲ್ಲವೇ ಎಂಬ ಖೇದವು ಆತನಿಗೆ ಉಂಟಾಗಿ, ಆಗ ಸ್ವಾಮಿ ಕೃಪೆಯು ಆತನನ್ನು ಸದ್ಗುರುವನ್ನು ಹೊಂದುವಹಾಗೆ ಮಾಡುತ್ತದೆ. ಆ ಸದ್ಗುರುವಿನ ಕೃಪೆಯಿಂದ ಜ್ಞಾನವನ್ನು ಸಂಪಾದಿಸಿಕೊಂಡು ಶಾಸ್ತ್ರದಲ್ಲಿ ಮಮತೆಯು ಹುಟ್ಟಿ ಜ್ಞಾನ ಸಂಪಾದನೆಯಲ್ಲಿ ಸಾರತಮವಾದುದು ರಹಸ್ಯತ್ರಯಜ್ಞಾನವೆಂಬ ನಿಷ್ಕರ್ಷೆಯು ಸದ್ಗುರುವಿನ ಉಪದೇಶ ಬಲದಿಂದುಂಟಾಗುತ್ತದೆ. ಈ ರಹಸ್ಯತ್ರಯದ ಸ್ವಾರಸ್ಯವನ್ನು ಗ್ರಹಿಸಲು ಪ್ರಥಮತಃ ತಿಳಿಯಬೇಕಾದುದು, ಪ್ರತಿತಂತ್ರ ರೂಪವಾದ ಯಥಾರ್ಥವಾದ ಸಿದ್ಧಾಂ

ತವೂ, ದೇಹಾತ್ಮ ಸಂಬಂಧವೂ, ಸ್ವಾಮಿಗೂ ತನಗೂ ಜಗತ್ತಿಗೂ ಇರುವ ಸಂಬಂಧವೂ ಎಂಬದಾಗಿ ಹೇಳಿ ಅವುಗಳೆಲ್ಲಾ ಬಹು ಸ್ಫುಟವಾಗಿ ಚರ್ಚಿಸಲ್ಪಡುತ್ತದೆ. ಅನಂತರ ಅರ್ಥಪಂಚಕವನ್ನು ತಿಳಿದವನೀಗ ಜ್ಞಾನಿ ಎಂಬದಾಗಿ ಹೇಳಿ, ಸರ್ವಶಾಸ್ತ್ರಗಳೂ, ಈ ಮಂತ್ರಗಳಾದ ರಹಸ್ಯ ತ್ರಯವೂ, ಆ ಅರ್ಥ ಪಂಚಕವನ್ನೇ ವಿಶದವಾಗಿ ಬೋಧಿಸುತ್ತವೆಂಬುವದನ್ನು ಹೇಳುವದಕ್ಕಾಗಿ ಅರ್ಥಪಂಚಕವು ಆವುದೆಂಬುವದನ್ನುಪದೇಶಿಸುತ್ತಾರೆ. ಮುಮುಕ್ಷುವಾದ ಚೇತನನಿಗೆ ಮುಖ್ಯವಾಗಿ ಪ್ರಕೃತ್ಯಾತ್ಮ ಭ್ರಾಂತಿಯೂ, ಸ್ವತಂತ್ರಾತ್ಮ ಭ್ರಾಂತಿಯೂ ತೊಲಗಬೇಕಾದ ಪ್ರಯುಕ್ತ, ತತ್ವತ್ರಯವಾದ ಚಿದಚಿದೀಶ್ವರರುಗಳ ಸ್ವರೂಪ ಸ್ಥಿತಿ ಪ್ರವೃತ್ತಿ ಭೇದಗಳೇ ಮೊದಲಾದವುಗಳ ಜ್ಞಾನವಿಲ್ಲದೆ ಇವುಗಳ ನಿವೃತ್ತಿ ಯುಂಟಾಗಲಾರದೆಂದು ಭಾವಿಸಿ, ತತ್ವತ್ರಯಾದಿ ನಿರೂಪಣವನ್ನು ಮಾಡುತ್ತಾರೆ. ಸ್ವಾಮಿಯಲ್ಲಿ ನಿಶ್ಚಲವಾದ ಭಕ್ತಿಯುಂಟಾಗಿ ಏಕಾಂತಿ, ಪರಮೈಕಾಂತಿ ಎನಿಸಲು ಮೊದಲು ಪರಮಾರ್ಥ ಪರದೇವತೆಯಾರೆಂದು ತಿಳಿಯುವದು ಅತ್ಯಾವಶ್ಯಕವಾದುದರಿಂದ ಅಂತಹ ಪರಮಾರ್ಥ ಪರದೇವತೆಯು ಲಕ್ಷ್ಮೀನಾರಾಯಣನೆಂದು ಸ್ಥಾಪಿಸಿ, ಮೋಕ್ಷಾರ್ಥಿಗೆ ಶರಣಾಗತಿ ಧರ್ಮದಲ್ಲಭಿರುಚಿಯುಂಟಾಗಿ ಅಧಿಕಾರಿಯೆನಿಸುವದಕ್ಕೆ ಮೋಕ್ಷದಲ್ಲಿನ ನಿರತಿಶಯಾನಂದಕ್ಕೂ, ಸಂಸಾರದಲ್ಲಿರುವ ಅನಂತ ದುಃಖಗಳಿಗೂ, ಇರುವ ವ್ಯತ್ಯಾಸವನ್ನು ಬಹು ನಿಪುಣತರವಾಗಿ ತೋರ್ಪಡಿಸಿರುತ್ತಾರೆ.ಅನಂತರ ಮೋಕ್ಷಾರ್ಥಿಗೆ ಎರಡೇ ಮಾರ್ಗಗಳೇ ಇರುವವೆಂದೂ, ಅವು ಭಕ್ತಿ ಪ್ರಪತ್ತಿಗಳೆಂದೂ ಹೇಳಿ, ಅವುಗಳಿಗಿರುವ ಪರಸ್ಪರ ವೈಲಕ್ಷಣ್ಯವನ್ನು ತೋರಿಸಿ, ಅವುಗಳಲ್ಲಿ ಶಕ್ತನಿಗೆ ಭಕ್ತಿ ಮಾರ್ಗವೇ ಉಪಾಯವೆಂಬದಾಗಿಯೂ, ಅಶಕ್ತನಿಗೆ ಪ್ರಪತ್ತಿಯೇ ಸುಲಭಮಾರ್ಗವೆಂಬದಾಗಿಯೂ ಹೇಳುತ್ತಾರೆ. ಅನಂತರ ಮುಮುಕ್ಷುವು ಹೇಗಿದ್ದರೆ ಅಶಕ್ತನೆಂಬುವದನ್ನುಪಪಾದನ ಮಾಡುತ್ತಾರೆ. ಮೋಕ್ಷಸಾಧನೋಪಾಯ ಚರ್ಚೆಯನ್ನನಂತರ ಹಿಡಿದವರಾಗಿ ಉಪಾಯವು ಸಿದ್ಧೋಪಾಯ, ಸಾಧ್ಯೋಪಾಯ ವೆಂದು ಎರಡು ವಿಧವೆಂಬದಾಗಿಯೂ ಅದರಲ್ಲಿ ಸಿದ್ಧೋಪಾಯವು ಸರ್ವೇಶ್ವ

ರನೇ ಎಂಬದಾಗಿಯೂ, ಸಾಧ್ಯೋಪಾಯಗಳು ಭಕ್ತಿ ಪ್ರಪತ್ತಿ ಮಾರ್ಗಗಳೆಂಬದಾಗಿಯೂ, ಈ ಪ್ರಪತ್ತಿ ಮಾರ್ಗದಲ್ಲಿ ಸಮಸ್ತ ಅಶಕ್ತರಿಗೂ, ಚಂಡಾಲ ಮೊದಲುಗೊಂಡು ಸಮಸ್ತ ವರ್ಣದ ಜನರಿಗೂ ಅಧಿಕಾರ ಉಂಟೆಂಬುದು ಶ್ರುತಿ ಸ್ಮೃತಿ ಸಮ್ಮತವಾದ ವಿಷಯವೆಂಬದಾಗಿ ಸ್ಥಾಪಿಸುತ್ತಾರೆ. ತದನಂತರ ಪ್ರಪತ್ತ್ಯನುಷ್ಠಾನ ಕ್ರಮದಲ್ಲಿ ಅದಕ್ಕೆ ಅಂಗಗಳಾವುವು, ಅಂಗಿಯಾವುದು ಎಂಬುದಂ ತಿಳಿಸಿ, ಅನುಷ್ಠಾನ ಕ್ರಮವನ್ನುಪಪಾದಿಸಿ, ಅಂತಹ ಪ್ರಪದನಾನುಷ್ಠಾನಾನಂತರ ಮುಮುಕ್ಷುವು ಕೃತ ಕೃತ್ಯನೆಂಬದಾಗಿಯೂ, ಅಂತವನು ಸ್ವನಿಷ್ಠೆಯ ಮಾಹಾತ್ಮ್ಯೆಯನ್ನರಿತವನಾಗಿರಬೇಕೆಂಬದಾಗಿಯೂ, ಅಧ್ಯಾತ್ಮ ವಿದ್ಯೆಯಲ್ಲಭಿರುಚಿಯುಳ್ಳವನಾಗಿ ಭಾಗವತರೊಂದಿಗೆ ಸೇರಿ, ಬ್ರಹ್ಮವಿದ್ಯೆಯನ್ನು ಸಂಗ್ರಹಿಸುತ್ತಾ ತನ್ನ ಶಿಷ್ಯರಿಗೆ ಅದನ್ನುಪದೇಶಿಸುತ್ತಾ ನಿತ್ಯ ಕರ್ಮಾನುಷ್ಠಾನನಿರತನಾಗಿ ಭಗವತ್ಕೈಂಕರ್ಯಗಳನ್ನೆಸಗುತ್ತಿರಬೇಕೆಂದು ಹೇಳಿದ್ದಲ್ಲದೆ, ಈ ಭಗವತ್ಕೈಂಕರ್ಯಕ್ಕೆ ಭಾಗವತ ಕೈಂಕರ್ಯದವರಿವಿಗೂ ಅನ್ವಯವೆಂಬುವದನ್ನು ಸ್ಪಷ್ಟಪಡಿಸಿದವರಾಗಿ ಶಾಸ್ತ್ರೀಯ ನಿಯಮನ ಪ್ರಕಾರ ಈತನು ವರ್ತಿಸತಕ್ಕದ್ದೆಂದು ವಿಧಿಸಿರುತ್ತಾರೆ. ಅಂತಹ ಕೃತಕೃತ್ಯನು ಸಾಪರಾಧಿಯಾದರೆ ಅದಕ್ಕೆ ಪರಿಹಾರ ಹೇಗೆಂಬುವದನ್ನು ತೋರ್ಪಡಿಸಿರುತ್ತಾರೆ. ಆ ಮೇಲೆ ಅಂತಹ ಕೃತ ಕೃತ್ಯನು ಎಂತಹ ಸ್ಥಾನ ವಿಶೇಷದಲ್ಲಿ ವಸಿಸತಕ್ಕದ್ದೆಂಬುವದನ್ನು ಚರ್ಚಿಸಿ, ದೇಹಾವಸಾನಕಾಲದಲ್ಲಿ ಜೀವನ ನಿರ್ಯಾಣ ಪ್ರಕಾರವನ್ನೂ, ಅರ್ಚಿರಾದಿ ಮಾರ್ಗಗಳಲ್ಲವನಿಗುಂಟಾಗುವ ಸತ್ಕಾರಗಳನ್ನೂ ಅನಂತರ ಪರಿಪೂರ್ಣ ಬ್ರಹ್ಮಾನುಭವವನ್ನೂ ಬಹು ವಿಶದವಾಗಿ ವರ್ಣಿಸಿರುತ್ತಾರೆ.

ಅನಂತರ ಸ್ಥಿರೀಕರಣರೂಪವಾದ ದ್ವಿತೀಯ ಭಾಗದಲ್ಲಿ, ಸಿದ್ಧೋಪಾಯ ಸಾಧ್ಯೋಪಾಯಗಳ ಚರ್ಚೆಯನ್ನು ಅಂಗೀಕರಿಸಿದವರಾಗಿ, ಸಿದ್ಧೋಪಾಯನು ಲಕ್ಷ್ಮೀವಿಶಿಷ್ಟನಾದ ನಾರಾಯಣನೇ ಎಂಬದಾಗಿ ಸ್ಥಾಪನಮಾಡಿ, ಇತರರು ಲಕ್ಷ್ಮಿಗೆ ಉಪಾಯತ್ವದಲ್ಲಿ ಸಂಬಂಧವಿಲ್ಲವೆನ್ನುವ ಪೂರ್ವ ಪಕ್ಷವನ್ನು ಖಂಡಿಸುತ್ತಾರೆ; ಇನ್ನೂ ಸಾಧ್ಯೋಪಾಯ

ವಾದ ಪ್ರಪತ್ತಿ ಧರ್ಮದ, ಅಧಿಕಾರ, ಸ್ವರೂಪ, ಪರಿಕರಂಗಳಲ್ಲಿ ಇತರರು ಹೇಳುವ ಶಂಕಾಗಳನ್ನು ನಿರಾಕರಿಸಿ, ಅವುಗಳ ಸರಿಯಾದ ಅಭಿಪ್ರಾಯಗಳನ್ನು ತಿಳಿಸುತ್ತಾರೆ. ಪ್ರಪತ್ತಿ ಧರ್ಮದ ಮಾಹಾತ್ಮ್ಯವನ್ನು ಅತಿಶಯೋಕ್ತಿಯಿಂದ ಹೇಳುವದೂ, ಅದರ ಮಾಹಾತ್ಮ್ಯವನ್ನು ತಗ್ಗಿಸಿ ಹೇಳುವದೂ, ಈ ಎರಡೂ ಅಶಾಸ್ತ್ರೀಯವಾದುದೆಂದು ಹೇಳಿ, ಅಂತವರಭಿಪ್ರಾಯವು ಸರ್ವಾತ್ಮನಾಗ್ರಾಹ್ಯವಲ್ಲವೆಂದು ತಿಳಿಸುತ್ತಾರೆ.

ಆಮೇಲೆ ಮೂರನೇ ಭಾಗದಲ್ಲಿ ಮೂರು ಅಧಿಕಾರಗಳಿಂದ ಮೂಲ ಮಂತ್ರ, ದ್ವಯ, ಚರಮ ಶ್ಲೋಕಗಳಾದ ಮೂರು ರಹಸ್ಯಗಳ ಅನೋಘಾರ್ಥ, ತಾತ್ಪರ್ಯ, ಮಹಿಮೆಗಳು ಬಹು ಸ್ವಾರಸ್ಯವಾಗಿಯೂ ವಿಶದವಾಗಿಯೂ ಉಪಪಾದಿಸಲ್ಪಟ್ಟಿವೆ. ಇಷ್ಟು ಅಭಿಪ್ರಾಯಗಳು ಈ ಮಂತ್ರಗಳನ್ನು ಒಳಗೊಂಡಿವೆಯೇ ಎಂಬದಾಗಿ ಮನವು ಆಶ್ಚರ್ಯ ಪಡುವಹಾಗೆ ವಿಶದೀಕರಿಸಲ್ಪಟ್ಟಿವೆ.

ಕೊನೆಗೆ ನಾಲ್ಕನೇ ಭಾಗದಲ್ಲಿ ಆಚಾರ್ಯ ಕೃತ್ಯವೆಂಥಾದ್ದಾಗಿರಬೇಕೆಂಬವಾಗಿಯೂ, ಶಿಷ್ಯ ಕೃತ್ಯವು ಎಂಥಾದ್ದಾಗಿರಬೇಕೆಂಬದಾಗಿಯೂ ಹೇಳಿ, ಈ ಅಸದೃಶವಾದ ಗ್ರಂಥದ ಪರಿಸಮಾಪ್ತಿಯನ್ನು ಮಾಡಿರುತ್ತಾರೆ.

ಇಂತಹ ದಿವ್ಯ ಗ್ರಂಥರತ್ನವನ್ನು ವಿಶಿಷ್ಟಾದ್ವೈತ ಸಿದ್ಧಾಂತ ಸ್ಥಾಪಕರಾದ ಯತಿವರ್ಯರ ದಿವ್ಯ ಸೂಕ್ತಿಗಳಿಗೇನೇ ತಮ್ಮ ಕಾಲವನ್ನೆಲ್ಲಾ ಕೊಟ್ಟ ಈ ಮಹನೀಯರಾದ ಶ್ರೀ ಮನ್ನಿಗಮಾಂತ ದೇಶಿಕರವರು ರಚಿಸಿರುವದರಿಂದ ಪ್ರತಿಯೊಬ್ಬ ವಿಶಿಷ್ಟಾದ್ವೈತಿಯು ತನ್ನ ಐಹಿಕ ಕಾರ್ಯಗಳ ಮಧ್ಯದಲ್ಲಿ ಸ್ವಲ್ಪ ಅವಕಾಶ ಮಾಡಿಕೊಂಡು,ಅಂತಹ ಕಾರ್ಯಗಳಲ್ಲೇ ಮಗ್ನನಾಗದೆ ಪಠನಮಾಡಿ ಪ್ರಪತ್ತಿ ಮಾರ್ಗವನ್ನು ಅವಲಂಬಿಸತಕ್ಕದ್ದು ಮುಖ್ಯ ಕರ್ತವ್ಯವಾಗಿದೆ.

ಈ ಗ್ರಂಥೋಪ ಕ್ರಮವು ಗುರುಮುಖೇನ ಉಪದೇಶರೀತ್ಯಾ ನಡೆಯ ಬೇಕಾದುದರಿಂದ, ಪ್ರಸವನಾನುಷ್ಠಾನವು ಎಲ್ಲಿ ನಡೆಯ ಬೇ

ಕೆಂಬ ಉದ್ದೇಶವಿರುತ್ತೋ ಆ ಗುರುವಿನ ಮೂಲಕವಾಗಿ ಉಪದೇಶವನ್ನು ಹೊಂದತಕ್ಕದ್ದು. ಆದರೆ ಗ್ರಂಥವು ವಿಪುಳವಾದುದರಿಂದಲೂ ಅದರಲ್ಲಿರುವ ವಿಷಯಗಳನ್ನು ಚನ್ನಾಗಿ ಗ್ರಹಿಸಬೇಕಾದರೆ ಹೆಚ್ಚು ಕಾಲವು ಬೇಕಾದುದರಿಂದಲೂ ಪೂರ್ತಿಯಾಗಿ ಅವರ ಸಾನ್ನಿಧ್ಯದಲ್ಲೇ ಕಾಲಕ್ಷೇಪ ನಡಿಯುವದು ದುಸ್ತರವಾದುದರಿಂದ ಶಾಂತಿಯನ್ನು ಮಾಡಿ ಸಾವಕಾಶದಿಂದ ಸಮಯ ದೊರತ ರೀತ್ಯಾ ಯಥಾಶಕ್ತ್ಯಾ ಕಾಲಕ್ಷೇಪವನ್ನು ನಡಿಸಬಹುದು. ಅಂಥಾವರುಗಳಿಗೆ ಸ್ವಲ್ಪ ಸಹಕಾರಿಯಾಗಿರಲಿ ಎಂಬಭಿಪ್ರಾಯದಿಂದ, ಆಚಾರ್ಯರು ಬರದಿರುವ ಈ ದಿವ್ಯಗ್ರಂಥಕ್ಕೆ ಕನ್ನಡ ಭಾಷಾಂತರವನ್ನೂ ಸ್ವಲ್ಪ ಕಷ್ಟವಾದ ಭಾಗಗಳಿಗೆ ತಾತ್ಪರ್ಯವನ್ನೂ ಬರೆವಿರುತ್ತೇನೆ. ಇದರಿಂದ ಕೆಲವರಿಗಾದರೂ ಪ್ರಯೋಜನ ಉಂಟಾದರೆ ಮುಮುಕ್ಷುವಾದ ಈ ಚೇತನನ ಕೈಂಕರ್ಯವು ಸಾರ್ಥಕ್ಯವನ್ನು ಹೊಂದಿತೆಂಬದಾಗಿ ಭಾವಿಸುವೆನು.

ಈ ಪ್ರಪದನಾನುಷ್ಠಾನವು ಗುರುಮುಖೇನವೇ ಅನುಷ್ಠಿಸತಕ್ಕದ್ದು ವಿಧಾಯಕವೆಂಬುವದನ್ನು ಸೂಚಿಸುವದಕ್ಕಾಗಿಯೂ, ಈ ಗುರುಪರಂಪರೆಯು ಅಮೋಘ ಶಾಸ್ತ್ರಾರ್ಥಗಳನ್ನು ಯಥಾರ್ಥವಾಗಿ ಸರ್ವಸಮಂಜಸವಾಗಿ ತಿಳಿಯಲು ಸಹಾಯ ಮಾಡಿದುದಕ್ಕಾಗಿಯೂ, ವೇದಶಾಸ್ತ್ರಗಳಿಗೆ ಅಪಾರ್ಥ ಕಲ್ಪನೆ ಮಾಡಿದವರನ್ನು ಖಂಡಿಸಿ ಸಮೀಚೀನಾರ್ಥಗಳನ್ನು ಬೋಧಿಸಿದ್ದಕ್ಕಾಗಿಯೂ, ಆ ಕಾರಣದಿಂದ ತಮಗೆ ಅವರಲ್ಲಿರುವ ಅತ್ಯಂತ ಭಕ್ತಿ ವಿಶ್ವಾಸ ಕೃತಜ್ಞತಾ ಭಾವಗಳನ್ನು ಸೂಚಿಸುವದಕ್ಕಾಗಿಯೂ, ಇಂತಹ ಸಾರತಮವಾದ ವಿಷಯಗಳನ್ನು ಕುರಿತು ಬರೆಯಲು ಉದ್ಯುಕ್ತರಾಗಿರುವ ತಮ್ಮ ಸಂಕಲ್ಪವು ಈಡೇರುವದಕ್ಕಾಗಿಯೂ, ಮೊದಲು "ಗುರುಪರಂಪರಾಸಾರವೆಂಬ ಹೆಸರಿನಿಂದ ಮುಖ್ಯವಾದ ಗುರುಗಳನ್ನು ಸ್ತೋತ್ರ ಮಾಡಿ ಅವರುಗಳಿಂದುಂಟಾದ ಮಹೋಪಕಾರಗಳಾವುವೆಂಬುವದನ್ನು ನಮ್ಮ ಅವಗಾಹನೆಗೆ ತರುತ್ತಾರೆ.

---

**ಗುರುಭ್ಯಸ್ತದ್ಗುರುಭ್ಯಶ್ಚ ನಮೋವಾಕ ಮಧೀಮಹೆ।**
**ವೃಣೀಮಹೇಚ ತತ್ರಾದ್ಯೌ ದಂಪತೀ ಜಗತಾಂಪತೀ ॥೧॥**

ಅರ್ಥ:-ಇಷ್ಟೆಲ್ಲಾ ಉಪಕಾರ ಮಾಡಿದವರಿಗೆ ಪ್ರಥಮ ಕೈಂಕರ್ಯವು ಪ್ರಣಾಮ ಸಮರ್ಪಣೆಯೆಂದು ಭಾವಿಸಿ, "ಗುರುಭ್ಯಸ್ತದ್ಗುರುಭ್ಯಃ" ಎಂಬದಾಗಿ ಪ್ರಾರಂಭಿಸಿರುತ್ತಾರೆ. "ಅಧೀಮಹೆ" ಎಂಬದಾಗಿ ಹೇಳಿರುವದರಿಂದ ಪ್ರಣಾಮವು ಪುನಃ ಪುನಃ ಮಾಡತಕ್ಕದ್ದು ಕರ್ತವ್ಯವೆಂಬದಾಗಿ ತೋರುತ್ತದೆ. "ಸಕೃದೇವ ಪ್ರಪನ್ನಾಯ" ಎಂಬದಾಗಿ ಹೇಳಿರುವದರಿಂದ ಪ್ರಣಾಮವು ಸರ್ವೇಶ್ವರನಿಗೂ ಗುರುಗಳು ಮುಂತಾದವರುಗಳಿಗೂ ಸಹ ಒಂದೇ ಸಲಮಾಡಿದರೆ ಸಾಕೆಂಬುವದು ಕೆಲವರ ಮತವು. "ಸಕೃದೇವ ಪ್ರಪನ್ನಾಯ" ಎಂದು ಆರಂಭಿಸಿದ ಶ್ಲೋಕವು, ಸ್ವಾಮಿಯ ಪ್ರಣತ ರಕ್ಷಣೆಯಲ್ಲಿರುವ ಆದರವನ್ನು ನಿದರ್ಶನ ಮಾಡುವ ವಾಕ್ಯವಾಗಿರುತ್ತದೆ. ಪ್ರಣಾಮವು ಕಾಯಿಕ ಕೈಂಕರ್ಯವಾಗಿ ಪ್ರವಾಹ ನಿತ್ಯದ ಹಾಗೆ ಪದೇ ಪದೇ ಮತ್ತು ಪ್ರತಿ ನಿತ್ಯವೂ ನಡೆಯ ತಕ್ಕದ್ದಾಗಿರುತ್ತದೆ. ಸಕೃತ್ಪ್ರಣಾಮ ಸಾಕಾದ ಪಕ್ಷದಲ್ಲಿ ಒಬ್ಬನು ಆತನ ಪುರುಷಾಯುಸ್ಸಿನಲ್ಲಿ ಒಂದು ಸಲ ಮಾಡಿದರೆ ಸಾಕೆಂಬದಾಗಿ ಯುಕ್ತಿ ಬರಬಹುದು. ಅದೂ ಅಲ್ಲದೆ ಅಷ್ಟೋತ್ತರ, ಸಹಸ್ರನಾಮ ಪಠನಗಳು ಕೂಡ ವ್ಯರ್ಥವಾಗಬಹುದು. ಶ್ರೀ ಭಾಷ್ಯಕಾರರವರು ವೈಕುಂಠ ಗದ್ಯದಲ್ಲಿ "ಇತಿ ಪ್ರಣಮ್ಯೋತ್ಥಾಯೋತ್ಥಾಯ ಪುನಃ ಪುನಃ ಪ್ರಣಮ್ಯ", ಎಂಬದಾಗಿ ಹೇಳಿರುವದರಿಂದಲೂ, ಆಳ್ವಂದಾರ್ ಸ್ತೋತ್ರದಲ್ಲಿ "ಭೂಯೋನಮೋಽಪರಿಮಿತಾಚ್ಯುತ—" ಎಂಬದಾಗಿಯೂ "ನಮೋ ನಮೋ ವಾಙ್ಮನಸಾತಿ ಭೂಮಯೇ" ಎಂಬದಾಗಿಯೂ, ಜಿತಂತಾ ಸ್ತೋತ್ರದಲ್ಲಿ "ಸ್ಥಿತಾಯ ಪರಮವ್ಯೋಮ್ನಿ ಭೂಯೋ ಭೂಯೋ ನಮಃ" ಎಂಬದಾಗಿಯೂ ಹೇಳಿರುವದರಿಂದಲೂ ಹಾಗೆಯೇ ಶ್ರೀ ಪರಾಶರ ಶುಕ ಮಹರ್ಷಿಗಳೂ ಕೂಡ ಪ್ರಯೋಗಿಸಿರುವದರಿಂದಲೂ ಅನೇಕಾವರ್ತಿ ಪ್ರಣಾಮವೇ ದಾಸಭೂತನಾದ ಚೇತನನಿಗೆ ಉಚಿತವಾದುದು. ಸ್ವಾಮಿಯು ಒಂದು ಸಲ

ಪ್ರಣಾಮದಿಂದಲೇ ತೃಪ್ತನಾಗಬಹುದು. ಆದರೆ ಈ ಚೇತನನ ದಾಸ ಭಾವಕ್ಕೆ ಏಕಪ್ರಣಾಮವು ಸರಿಯಾದುದಲ್ಲವಾದುದರಿಂದಲೂ ಆದರಿಂದ ದಾಸನಾದ ತನಿಗೇನೆ ತೃಪ್ತಿಕರವಾಮದಲ್ಲವಾದುದರಿಂದಲೂ, ಅದೂ ಅಲ್ಲದೆ ನಮ್ಮಗಳ ಪೂರ್ವಾಚಾರ್ಯರಾದ ಆಳವಂದಾರ್ ಭಾಷ್ಯಕರ್ ಪ್ರಭೃತಿಗಳು ಅನುಷ್ಠಿಸಿದುದಕ್ಕ ವಿರೋಧವಾದುದರಿಂದಲೂ ಪ್ರಣಾಮವು "ಭೂಯೋ ಭೂಯಃ" ನಡಿಸುವದೇ ಯುಕ್ತವಾಗಿ ತೋರುತ್ತದೆ. ಶ್ರೀ ಭಾಷ್ಯಕಾರರ ಕಾಲದಲ್ಲಿ ಗುರುಗಳಿಗೆ ಪ್ರಣಾಮವನ್ನು ಅನೇಕಾವರ್ತಿ ಮಾಡುತ್ತಿದ್ದವೆಂಬುದು ಸ್ಫುಟವಾಗಿ ತೋರುವ ಒಂದು ಇತಿ ಹಾಸ ಕೂಡ ಉಂಟು. ಶ್ರೀ ಭಾಷ್ಯಕಾರವರು ಶ್ರೀರಂಗದಲ್ಲಿರುವಾಗ ಇವರಿಗೆ ಮಹಾನಸ (ಅಡಿಗೇ ಮನೆ) ಕೈಂಕರ್ಯಕ್ಕೆ ಸರಿಯಾವವರಿಲ್ಲದೇ ಇದ್ದುದರಿಂದ ಇವರಿಗೆ ಆಹಾರದಲ್ಲಿ ವಿಷ ಮಿಶ್ರ ಮಾಡಿಕೊಡಬೇಕೆಂಬದಾಗಿ ಶ್ರೀ ಭಾಷ್ಯಕಾರರ ದ್ವೇಷಿಗಳ ಪ್ರಯತ್ನವು ನಡೆಯಿತು. ಇದು ಶ್ರೀ ಭಾಷ್ಯಕಾರರಿಗೆ ತಿಳಿದು ಭಿಕ್ಷಯನ್ನು ಪರಿಗ್ರಹಿಸದೆ, ಸನ್ಯಾಸಿಗಳಿಗೆ ಸ್ವಯಂ ಪಾಕವು ಕೂಡದಂದುದರಿಂದ ಮೂರುದಿನ ಉಪವಾಸವಿದ್ದರು. ಈ ವರ್ತಮಾನವು ಈ ಯತಿ ವರ್ಯರ ಆಚಾರ್ಯರುಗಳಾದ ಪೆರಿಯನಂಬಿ, ತಿರುಕ್ಕೋಟಿಯೂರ್ ನಂಬಿಯುವರು ಕೇಳಿ ಪರಿತಾಪಪಟ್ಟು ಯತಿವರ್ಯರನ್ನು ನೋಡುವದಕ್ಕೆ ಬರಲು; ಆಗ ಇವರು ಗುರುಗಳನ್ನು ಎದರು ಗೊಳ್ಳಲು ತಮ್ಮ ಶಿಷ್ಯರಾದ ಕಿಡಾಂಬಿಯಾಚ್ಚಾನ್‌ರವರನ್ನು ಕರದುಕೊಂಡು, ಮಧ್ಯಾಹ್ನದಲ್ಲಿ ಕಾವೇರಿಯ ಕಾದ ಮರಳಿನಲ್ಲಿ ಬರುತ್ತಿದ್ದ ಆಚಾರ್ಯರುಗಳನ್ನು ಕಂಡು, ಶ್ರೀ ಭಾಷ್ಯಕಾರರು ಮೊದಲು ಪೆರಿಯ ನಂಬಿಯುವರಿಗೆ ಪ್ರಣಾಮಗಳನ್ನೆಸಗಲು, ಸ್ವಲ್ಪ ಸಲ ಪ್ರಣಾಮವಾದನಂತರ ಸಾಕೆಂಬದಾಗಿ ಹೇಳಲು, ಅಲ್ಲಿಂದ ಯತಿಗಳವರು ತಿರುಕೋಟ್ಟಿಯೂರ್ ನಂಬಿಗೆ ಪ್ರಣಾಮಗಳನ್ನು ಮಾಡ ತೊಡಗಿದರು. ಆ ಮಧ್ಯಾಹ್ನದ ಕಾದ ಮರಳಿನ ಮೇಲೆ ಎಷ್ಟುಸಲ ನಮಸ್ಕಾರ ಮಾಡಿದರೂ ಈ ನಂಬಿಯವರು ಸಾಕೆಂದು ಹೇಳದೆ ಯತೀಶ್ವರರನ್ನು ಪುನಃ ಪುನಃ ಪ್ರಣಾಮಮಾಡಿಸಿದರಲ್ಲಾ ಎಂಬ ಪರಿತಾಪದಿಂದ ಇವರ ಅಂತೇವಾಸಿಯಾದ

ಕಿಡಾಂಬಿಯಾಚ್ಚಾನ್ ರವರು "ಇದೆಂತಹ ಗುರುಶಿಷ್ಯ ಕ್ರಮವು, ಪ್ರಾಣ ತೆಗೆಯುವವರಿವಿಗೂ ಪರೀಕ್ಷಿಸಬಹುದೇ ?" ಎನ್ನಲು, ಅದಕ್ಕೆ ನಂಬಿಯವರು "ನಿನ್ನಂತಹ ಶಿಷ್ಯನು ಯತಿವರ್ಯರಿಗೆ ಯಾರಾದರೂ ಉಂಟೇ ಎಂಬದಾಗಿ ಹುಡುಕುತ್ತಿದ್ದೆನು. ನೀನೀಗ ನಿಮ್ಮ ಗುರುವಾದ ಯತಿವರ್ಯರಿಗೆ ಇನ್ನುಮೇಲೆ ಮಹಾನಸ (ಅಡಿಗೇಮನೆ) ಕೈಂಕರ್ಯ ಮಾಡಲು ಅರ್ಹನು" ಎಂಬದಾಗಿ ಆಜ್ಞಾಪಿಸಿದುದರಿಂದ ಪ್ರಾಚಾರ್ಯರವರ ಆಜ್ಞೆಯನ್ನು ಕೈಕೊಂಡು ನಡಿಸಿದರೆಂಬ ಉಪಾಖ್ಯಾನವಿರುತ್ತದೆ. ಆದುದರಿಂದ ಪ್ರಣಾಮವು ನಮಶ್ಶಬ್ದದಿಂದ ವಾಚಕರೂಪದಲ್ಲೇ ಆಗಲಿ ಅಥವಾ ಕಾಯಕವಾಗಿಯೇ ಆಗಲಿ ಅನೇಕಸಲ ಮಾಡತಕ್ಕದ್ದೇ ವಿಹಿತವೆಂಬದಾಗಿ ನಮ್ಮ ಆಚಾರ್ಯರುಗಳ ಮತವಾಗಿ ತೋರುತ್ತದೆ. ಇದೂ ಅಲ್ಲದೆ ನಮಸ್ಕಾರಗಳನ್ನು ದೇವಭಾಗವತೋತ್ತಮರುಗಳಿಗೆ ಯುಗ್ಮವಾಗಿ ನಡಿಸತಕ್ಕದ್ದೆಂಬ ಶಾಸ್ತ್ರವೂ ಇರುತ್ತದೆ. ಶ್ರೀಭಾಷ್ಯಕಾರರವರ ಅನುಷ್ಠಾನವೇ ನಮಗೆ ಪರಮಗ್ರಾಹ್ಯವಾದುದರಿಂದ ನಾವುಗಳೂ ಹಾಗೆಯೇ ಅನುವರ್ತಿಸತಕ್ಕದ್ದು ವಿಧಾಯಕವಾಗಿರುತ್ತದೆ. ಇದೂ ಅಲ್ಲದೆ ೧೧ನೇ ಅಧ್ಯಾಯವಾದ ವಿಶ್ವರೂಪಾಧ್ಯಾಯದಲ್ಲಿ ಅರ್ಜುನನು ತನ್ನ ಮನಸ್ಸಿನ ತೃಪ್ತಿಗಾಗಿ "ನಮೋನಮಸ್ತೇಸ್ತು ಸಹಸ್ರಕೃತ್ವಃ ಪುನಶ್ಚ ಭೂಯೋಪಿ ನಮೋನಮಸ್ತೇ।" "ಶ್ರೀಕೃಷ್ಣನಾದ ನಿನಗೆ ಸಾವಿರಸಲ ನಮಸ್ಕಾರವು, ಅಷ್ಟು ಅಲ್ಲದೆ ಇನ್ನೂ ಅನೇಕಾವರ್ತಿ ನಮಸ್ಕಾರವು" ಎಂಬದಾಗಿ ಹೇಳಿರುತ್ತಾನೆ. ಈ ಅಭಿಪ್ರಾಯದಿಂದಲೇ ಶ್ರೀನಿಗಮಾಂತದೇಶಿಕರವರು "ನಮೋವಾಕಮಧೀಮಹೆ" ಎಂಬದಾಗಿ ಅಪ್ಪಣೆ ಕೊಡಿಸಿರುತ್ತಾರೆ. ಆದರೆ ಈ ಆಚಾರ್ಯರುಗಳಿಗೆ ಪ್ರಣಾಮ ಮಾಡುತ್ತೇನೆಂಬದಾಗಿ ಹೇಳದೆ, "ನಮಃ" ಎಂಬ ಶಬ್ದವನ್ನು ಪುನಃ ಪುನಃ ಅಧ್ಯಯನ ಮಾಡುತ್ತೇನೆಂಬದಾಗಿ ಹೇಳದುದರಭಿಪ್ರಾಯವೇನೆಂದರೆ, ಆಚಾರ್ಯರುಗಳ ವಿಷಯದಲ್ಲಿ, "ನಮಃ" ಎಂಬ ಶಬ್ದದಲ್ಲಿ ತೋರಿ, ಮುಂದೆ ಗ್ರಂಥದಲ್ಲಿ ವಿವರಿಸುವ ಸರ್ವ ಅಭಿಪ್ರಾಯಗಳೂ ಅನುಸಂಧಾನಮಾಡಬೇಕೆಂದು ತಾತ್ಪರ್ಯವು. ಹೀಗೆ ಈ ಶ್ಲೋಕದ ಪೂರ್ವಾರ್ಧದಿಂದ

ತಮ್ಮ ಆಚಾರ್ಯರಿಗೂ ಪ್ರಾಚಾರ್ಯರಿಗೂ ಅವರುಗಳ ಆಚಾರ್ಯರು ಗಳಿಗೂ ನಮಸ್ಕರಿಸಿ, ಉತ್ತರಾರ್ಧದಿಂದ ಆದಿದಂಪತಿಗಳಾಗಿ ಪರಮಾಚಾ ರ್ಯರಾಗಿರುವ ಲಕ್ಷ್ಮೀನಾರಾಯಣರಿಗೆ ಪ್ರಣಾಮವನ್ನು ಸಮರ್ಪಿಸು ತ್ತಾರೆ.

**ಅರ್ಥ :**—ಗುರುಭ್ಯಃ - ಸ್ವಾಚಾರ್ಯರಾದ ಶ್ರೀರಾಮಾನುಜಾ ಚಾರ್ಯರಿಗೂ (ಗೌರವಾರ್ಥದಿಂದ ಬಹುವಚನ), ತದ್ಗುರುಭ್ಯಃ - ಅವರ ಗುರುಗಳಾದ ವಾದಿಹಂಸಾದಿಗಳಿಗೂ, ಮತ್ತು ಅವರವರ ಗುರು ಗಳಿಗೂ, ನಮೋವಾಕಂ - ನಮಸ್ಕಾರವೆಂಬ ವಾಕ್ಯವನ್ನು, ಅಧೀಮಹೆ- ಪಠನಮಾಡುವೆವು. ತತ್ರ - ಆ ಗುರುಪರಂಪರೆಯಲ್ಲಿ, ಆದ್ಯೌ - ಮೊದಲನೆಯವರಾದ, ಜಗತಾಂ ಲೋಕಗಳಿಗೆಲ್ಲಾ, ಪತೀ - ಈಶ್ವರೇ ಶ್ವರಿಗಳಾದ, ದಂಪತೀ - ದಿವ್ಯದಂಪತಿಗಳನ್ನು, ವೃಣೀಮಹೆ - ಶರಣು ಹೊಂದುವೆವು. ಹೇಗೆ ಶರಣುಹೊಂದುವೆವೆಂದರೆ, ಈ ಲೋಕ ದಂಪತಿಗಳು ಪ್ರಾಪಕರೂ ಪ್ರಾಪ್ಯರೂ ಎಂಬದಾಗಿ ಶರಣುಹೊಂದುವೆ ವೆಂಬ ಭಾವವು. ಜಗತ್ತಿಗೆ "ಪತೀ" ಇಬ್ಬರೂ ಈಶ್ವರರೇ ಎಂಬಾ ಕ್ಷೇಪ ಬಂದೀತೆಂದು ಭಾವಿಸಿ, ದಂಪತೀ ಎಂಬ ಪ್ರಯೋಗದಿಂದ ಲಕ್ಷ್ಮೀಯುಸ್ವಾಮಿಗೆ ಶೇಷಭೂತಳಾಗಿ ಈಶ್ವರಿಯಾದುದರಿಂದ ಅಂತಹ ಕಾರಣವಿಲ್ಲವೆಂಬ ಭಾವವು.

ಪ್ರತಿಯೊಂದು ಗ್ರಂಥಕ್ಕೂ ಅನುಬಂಧಿಚತುಷ್ಟಯವಿರಬೇಕು. ಇವು ಯಾವುವೆಂದರೆ :—(೧) ವಿಷಯ, (೨) ಪ್ರಯೋಜನ, (೩) ಸಂಬಂಧ, (೪) ಅಧಿಕಾರಿ ಎಂಬದಾಗಿ ನಾಲ್ಕು. ಈ ಗುರುಪರಂಪರಾ ಸಾರವೆಂಬ ಗ್ರಂಥಕ್ಕೆ ಗುರುಗಳ ಮೂಲಕ ಮಾಡುವ ಶರಣಾಗತಿ ದ್ವಾರ ಮೋಕ್ಷವೇ ಪ್ರಯೋಜನ, ಗುರುಪಙ್ತಿಭಜನವೇ ವಿಷಯವು, ಅಧಿಕಾರಿಗಳು ಸರ್ವರೂ, ಲೋಕದಲ್ಲಿರುವವರೆಲ್ಲಾ ಎಂಬದಾಗಿ ತಿಳಿಯ ತಕ್ಕದ್ದು. ಏಕೆಂದರೆ ಗುರುಪಙ್ತಿಭಜನವೂ ಮೋಕ್ಷಪ್ರಾಪ್ತಿಯೂ ಸರ್ವರಿಗೂ ಬೇಕಾದುದೇ.

ಈ "ಗುರುಪರಂಪರಾಸಾರ" ವೇನು ಪ್ರತ್ಯೇಕಗ್ರಂಥವೇ ಅಥವಾ ಶ್ರೀಮದ್ರಹಸ್ಯತ್ರಯಸಾರಕ್ಕೆ ಸೇರಿದುದೇ ಎಂಬ ಶಂಕೆಯು

ಪ್ರತಿಯೊಬ್ಬ ಗ್ರಂಥಾವಲೋಕನಮಾಡುವವರಿಗೂ ಉಂಟಾಗಬಹುದು. ರಹಸ್ಯತ್ರಯಸಾರದಲ್ಲಿ ೩೨ ಅಧ್ಯಾಯಗಳಿವೆ. ಪ್ರತಿಯೊಂದಕ್ಕೂ ಅಧಿಕಾರವೆಂದು ಹೆಸರು ಕೊಡಲ್ಪಟ್ಟಿರುತ್ತದೆ. ಇದಕ್ಕೆ ಮಾತ್ರ ಹಾಗೆ ಹೆಸರು ಕೊಡದೆ, "ಗುರುಪರಂಪರಾಸಾರಃ" ಎಂಬ ನಾಮಧೇಯವು ಕೊಡಲ್ಪಟ್ಟಿರುತ್ತದೆ. ಅದೂ ಅಲ್ಲದೆ "ಉಪೋದ್ಘಾತಾಧಿಕಾರಃಪ್ರಥಮಃ" ಎಂಬದಾಗಿ ಉಪೋದ್ಘಾತಭಾಗಕ್ಕೆ ಕೊಟ್ಟಿರುವುದರಿಂದಲೂ ಮತ್ತು ಇದರ ಕೊನೆಯಲ್ಲಿ "ಗುರುಪರಂಪರಾಸಾರ ಸ್ಸಂಪೂರ್ಣಃ" ಎಂಬದಾಗಿ ಹೇಳಿರುವದರಿಂದಲೂ, ಇದು ರಹಸ್ಯತ್ರಯ ಸಾರಕ್ಕಿಂತಲೂ ಪೃಥಕ್ಕಾದುದೆಂದು ಭಾವಿಸಬೇಕಾಗಿರುತ್ತದೆ. ಆದರೆ ರಹಸ್ಯತ್ರಯಸಾರವನ್ನು ಅಚ್ಚು ಹಾಕಿರುವ ಸಂದರ್ಭಗಳಲ್ಲೆಲ್ಲಾ ಈ ಗುರುಪರಂಪರಾಸಾರವನ್ನು ಸೇರಿಸಿಯೇ ಇದನ್ನು ಗ್ರಂಥಾದಿಯಾಗಿ ಮುದ್ರಣಮಾಡಿರುವದರಿಂದಲೂ, ಸಂಪ್ರದಾಯ ಚನ್ನಾಗಿ ತಿಳಿದ ಆಚಾರ್ಯರುಗಳು ಶ್ರೀಮದ್ರಹಸ್ಯತ್ರಯಸಾರದ ಉಪದೇಶಕಾಲದಲ್ಲಿ ಗುರುಪರಂಪರಾಸಾರವನ್ನು ಪ್ರಾರಂಭಿಸಿ ಅನಂತರ ಉಪೋದ್ಘಾತಾಧಿಕಾರಕಾಲಕ್ಷೇಪ ಹೇಳುವದರಿಂದಲೂ, ಈ ಪ್ರಥಮ ಶ್ಲೋಕದಿಂದ ಸಾರಪ್ರಕಾಶಿಕಾ ವ್ಯಾಖ್ಯಾನ ಬರದವರು ಮುಂದೆ ಈ ಪ್ರಬಂಧದಲ್ಲಿ ಉಪನ್ಯಸಿಸುವ ಅಧಿಕಾರ ವಿಷಯಗಳು ಇಲ್ಲಿ ಸ್ಫೂರ್ತಿಗೆ ಬರುವ ಹಾಗೆ ಬರೆಯಲ್ಪಟ್ಟಿವೆ ಎಂಬದಾಗಿ ಹೇಳಿರುವದರಿಂದಲೂ, ಇದು ಪ್ರತ್ಯೇಕ ಗ್ರಂಥವಾದರೂ ಆಚಾರ್ಯಭಜನರೂಪವಾಗಿಯೂ, ವಿಷಯಸೂಚಕವಾಗಿಯೂ, ಮುಖ್ಯಪ್ರಬಂಧಕ್ಕೂ ಈ ಗ್ರಂಥಕ್ಕೂ ಸಂಬಂಧವಿದೆ ಎಂಬದಾಗಿ ಭಾವಿಸತಕ್ಕದ್ದು. ವಿಷಯಸೂಚನೆ ಹೇಗೆಂದರೆ ಹೇಳುತ್ತಾರೆ:—ಈ ಶ್ಲೋಕದ ಪೂರ್ವಾರ್ಧದಿಂದ, ಗುರುಪರಂಪರಾಸಾರ, ಉಪೋದ್ಘಾತಾಧಿಕಾರ, ಆಚಾರ್ಯಕೃತ್ಯಶಿಷ್ಯಕೃತ್ಯಾಧಿಕಾರಗಳರ್ಥವು ಸೂಚಿಸಲ್ಪಟ್ಟಿತು. "ವೃಣೀಮಹೆ" ಎಂಬುವದರಿಂದ ಮುಮುಕ್ಷುತ್ವಾಧಿಕಾರ ಮೊದಲು ಸಾಂಗಪ್ರಪದನಾಧಿಕಾರದವರಿವಿಗೂ ಇರುವ ಅಧಿಕಾರಗಳು ಸಂಗ್ರಹಿಸಲ್ಪಟ್ಟವು. "ಆದ್ಯಾ" ಎಂಬ ಪದದಲ್ಲಿ ಜಗತ್ಕಾರಣತ್ವವು ತೋರುವದರಿಂದ ಚಿದಚಿದೀಶ್ವರರಂ ಕುರಿತು,

**ಪೊಯ್‌ಕೈಮುನಿ, ಪೂದತ್ತಾರ್, ಪೇಯಾಳ್ವಾರ್
ತಣ್‌ಪೊರು ನಲ್‌ವರುಂ ಕುರುಕೇಶ, ವಿಷ್ಣುಚಿತ್ತನ್,**

ಹೇಳುವ, ಅರ್ಥಪಂಚಕ, ತತ್ತ್ವತ್ರಯ ಪರದೇವತಾಪಾರಮಾರ್ಥ್ಯ ಮೊದಲಾದ ಅಧಿಕಾರಗಳರ್ಥವು ಸೂಚಿಸಲ್ಪಟ್ಟಿತು. "ದಂಪತೀ" ಎಂಬ ಪ್ರಯೋಗದಿಂದ ಸಿದ್ಧೋಪಾಯ ಶೋಧನಾಧಿಕಾರದ ರ್ಥವು ತೋರಿದಂತಾಯಿತು. "ಜಗತಾಂ ಪತೀ" ಎಂಬುವದರಿಂದ ಪ್ರಧಾನಪ್ರತಿತಂತ್ರಾಧಿಕಾರದಭಿಪ್ರಾಯವು ಗರ್ಭೀಕರಿಸಲ್ಪಟ್ಟಿತು. "ನಮೋ ವಾಕಂ" ಎಂಬುವದರ ಮೂಲಕ ಕೈಂಕರ್ಯವನ್ನೂ ತನ್ಮೂಲಕ ಶೇಷವೃತ್ತಿಯನ್ನೂ ಪ್ರದರ್ಶನಮಾಡುವದರಿಂದ ಪುರುಷಾರ್ಥಕಾಷ್ಠಾಧಿಕಾರದ ಸಾರವು ದ್ಯೋತಕವಾಗುತ್ತದೆ. ಉತ್ತರಾರ್ಧವನ್ನೆಲ್ಲಾ ಸಂಪೂರ್ಣವಾಗಿ ವಿಮರ್ಶೆಮಾಡಿದರೆ ಸಾರಭೂತವಾದ ಮೂಲಮಂತ್ರ, ದ್ವಯ, ಚರಮಶ್ಲೋಕಾಧಿಕಾರಗಳಭಿಪ್ರಾಯವು ಗೋಪ್ಯವಾಗಿ ಅಡಗಿವೆ ಎಂಬದಾಗಿ ತೋರುತ್ತದೆ.

ಇನ್ನು ಮುಂದೆ ತಾವು ರಹಸ್ಯತ್ರಯಸಾರದಲ್ಲಿ ಸಂಗ್ರಹಿಸಿರುವ ಅಮೋಘಾಭಿಪ್ರಾಯಗಳೂ, ಸಕಲ ರಹಸ್ಯಾರ್ಥಗಳೂ ಎಲ್ಲವೂ, ಆಳ್ವಾರುಗಳ ದಿವ್ಯಸೂಕ್ತಿಗಳಿಂದಲ್ಲವೇ ತಮ್ಮ ಆಚಾರ್ಯರುಗಳಿಗೂ ವಿದಿತವಾಗಿ ಅವುಗಳು ಸ್ಥಿರೀಕರಿಸಲ್ಪಟ್ಟವು ಎಂಬ ವಿಶೇಷ ಕೃತಜ್ಞತಾಭಾವದಿಂದ ಆಳ್ವಾರುಗಳನ್ನು "ಪೊಯಿಕೆಮುನಿ" ಎಂಬ ಮುಂದಿನ ಪಾಶುರದಿಂದ ಕೊಂಡಾಡುತ್ತಾರೆ.

ಇಲ್ಲಿ ಹತ್ತು ಆಳ್ವಾರುಗಳನ್ನೂ ಸ್ತೋತ್ರರೂಪವಾಗಿ ಧ್ಯಾನಿಸುತ್ತಾರೆ :—

(1) ಪೊಯ್‌ಕೈಮುನಿ - ಸರೋಮುನಿಗಳು, (೨) ಪೂದತ್ತಾರ್ - ಭೂತಮುನಿಗಳು, (೩) ಪೇಯಾಳ್ವಾರ್ - ಮಹದಾಖ್ಯಮುನಿಗಳು, ಇವರಿಗೆ ಭಗವದ್ವಿಷಯವಾಗಿ ತುಂಬಾ ಹೆಚ್ಚು ಭಕ್ತಿ ಇದ್ದು ಉನ್ಮತ್ತಾವಸ್ಥೆಯಲ್ಲಿರುವವರ ಹಾಗೆ ನಟಿಸುತ್ತಿದ್ದುದರಿಂದ ಪೇಯಾಳ್ವಾರ್ - ಹುಚ್ಚು ಆಳ್ವಾರೆಂಬದಾಗಿ ಹೆಸರು. ಅಥವಾ ಪೆರಿಯ -

## ತುಯ್ಯಕುಲಶೇಖರರ್, ನಮ್ಮಾಣನಾರ್ರ್, ತೊಂಡರಡಿಪ್ಪೊಡಿ, ಮಳಿಶೈವಂದ ಶೋತಿ

ದೊಡ್ಡವರಾದ, ಮಹನೀಯುರಾದ ಆಳ್ವಾರೆಂಬದಾಗಿಯೂ ಅರ್ಥಹೇಳಬಹುದು. ಆದುದರಿಂದ ಇವರಿಗೆ ಮಹದಾಹ್ವಯರ್ ಎಂಬದಾಗಿ "ಭೂತಂ ಸರಶ್ಚ ಮಹದಾಹ್ವಯಭಟ್ಟನಾಥ" ಎಂಬ ಶ್ರೀಪರಾಶರಭಟ್ಟರ ಶ್ಲೋಕದಲ್ಲಿ ಹೇಳಲ್ಪಟ್ಟದೆ. (4) ತಣ್ಪೊರುನಲ್ವರುಂ ಕುರುಕೇಶ‌ರ್ ಅಂದರೆ,ತಣ್ - ಶೀತಲವಾದ, ಪೊರುನಲ್ - ತಾಮ್ರಪರ್ಣೀ ನದಿಯು, ವರುಂ - ಬರುವ ಅಂದರೆ ತೀರದಲ್ಲಿ ರಮಣೀಯವಾಗಿರುವ, ಕುರುಕೇಶರ್ - ಕುರುಕಾನಗರಿ ಎಂಬದಾಗಿ ಹೆಸರುಳ್ಳ ಆಳ್ವಾರ್ತಿರುನಗರಿಗೆ ಸ್ವಾಮಿಯಾದ ನಮ್ಮಾಳ್ವಾರವರು (ಇವರಿಗೆ ಶಠಗೋಪರೆಂಬದಾಗಿಯೂ ಹೆಸರುಂಟು). ತಾಮ್ರಪರ್ಣೀನದಿಯನ್ನು ಹೇಳಿದುದು ಆ ದಿವ್ಯದೇಶಕ್ಕೆ ಅದರಿಂದ ರಮಣೀಯತೆಯನ್ನು ಹೇಳುವದಕ್ಕೂ ಅಲ್ಲದೆ, ಭಾಗವತದಲ್ಲಿ " ಕಲೌಖಲುಭವಿಷ್ಯಂತಿ ನಾರಾಯಣ ಪರಾಯಣಾಃ। ತಾಮ್ರಪರ್ಣೀ ನದೀ ಯತ್ರ ಕೃತಮಾಲಾ ಪಯಸ್ವಿನೀ॥" ಎಂಬದಾಗಿ ಕಲಿಯುಗದಲ್ಲೂ ಕೂಡ ಆ ತಾಮ್ರಪರ್ಣೀ ನದೀ ಹತ್ತಿರ ಶ್ರೀಮನ್ನಾರಾಯಣಪರಾಯಣರಾದ ಭಾಗವತೋತ್ತಮರು ವಸಿಸುವರೆಂದು ಇದನ್ನುದ್ದೇಶಿಸಿ ಹೇಳಿದ ಮಹರ್ಷಿಯ ವಾಕ್ಯನ್ನು ಸ್ಮರಿಸಿ, ಕೊಂಡಾಡುವದಕ್ಕಾಗಿಯೂ, ಮತ್ತು ಅದಲ್ಲದೆ, ತಾಮ್ರಪರ್ಣೀ ನದಿಯು ಶೀತಲೋದಕ ಯುಕ್ತವಾಗಿರುವದರಿಂದ, ಶ್ರೀಮನ್ನಮ್ಮಾಳ್ವಾರವರು ಭಗವದ್ಭಾಗವತ ವಿಷಯದಲ್ಲಿ ಪರಮಾರ್ದ್ರ ಹೃದಯರೆಂಬದಾಗಿ ಸೂಚಿಸುವದಕ್ಕಾಗಿಯೂ "ತಣ್ಪೊರುನಲ್ವರುಂ" ಎಂಬ ವಿಶೇಷಣವನ್ನುಪಯೋಗಿಸಿರುತ್ತಾರೆ. ಇವರು ಚೇತನರುಗಳ ವಿಷಯದಲ್ಲಿ ತುಂಬಾ ದಯಾರ್ದ್ರ ಹೃದಯ ಉಳ್ಳವರೆಂಬ ವಿಷಯವನ್ನು, ಮಧುರಕವಿಯಾಳ್ವಾರವರು ತಾವು ನಮ್ಮಾಳ್ವಾರವರನ್ನು ಕೊಂಡಾಡಿ ಬರೆದ "ಕಣ್ಣಿನುಣ್ ಶಿರತ್ತಾಂಬೆಂ"ಬುವ ಗ್ರಂಥದಲ್ಲಿ "ಅರುಳ್ ಕಂಡೀರ್ ಇವ್ವುಲಗಿಲ್ ಮಿಕ್ಕುದೇ" ಈ ನಮ್ಮಾಳ್ವಾರ್ರವರಿಗ

**ವೈಯ್ಯ ಮೆಲ್ಲಾ ಮರ್ತ್ಯವಿಳಂಗವಾಳ್ವೀಲೆಂದು ಮೆಂಗೈಯರ್ ಕೊನೆನ್ರಿವರಗಳ್ ಮುಗಿಳಿಂದು ಪಾಡಂ ।**

ಇರುವ ಪ್ರೀತಿಯು ಅಥವಾ ಸಾರ್ವತ್ರಿಕವಾಗಿರುವ ಪ್ರೇಮವೂ ಈ ಭೂಲೋಕದಲ್ಲಿ ಹೆಚ್ಚಾದ ವಿಷಯವಾಗಿರುತ್ತದೆಂಬುದಾಗಿ ಹೇಳಿರುತ್ತಾರೆ.

(5) ವಿಷ್ಣುಚಿತ್ತರ್—ಶ್ರೀ ಭಟ್ಟನಾಥರೆಂದು ಹೆಸರು ಹೊಂದಿದ ಪೆರಿಯಾಳ್ವಾರವರು. ಇವರಿಗೆ "ವಿಲ್ಲಿಪುತ್ತೂರ್‌ಕೋನ್" ಅಂದರೆ ಶ್ರೀವಿಲ್ಲಿಪುತ್ತೂರ್ ಸ್ವಾಮಿಯು ಎಂಬದಾಗಿಯೂ "ದ್ವಿಜಕುಲ ತಿಲಕ" ಬ್ರಾಹ್ಮಣಕುಲಶ್ರೇಷ್ಠರೆಂಬದಾಗಿಯೂ ಹೆಸರುಗಳುಂಟು. ಇವರನ್ನು ಹೇಳುವುದರಿಂದ ಇವರ ಮಗಳಾದ ಶ್ರೀ ಆಂಡಾಳ್ ಅಥವಾ ಗೋದಾದೇವಿಯನ್ನೂ ಹೇಳಿದಂತಾಯಿತು. ಹೇಗೆಂದರೆ 'ವಿಷ್ಣುಚಿತ್ತರ್' ಅಂದರೆ ವಿಷ್ಣುವಿನ ಹೃದಯವು. ಇವರ ಮಗಳು ಭೂದೇವಿಯ ಅವತಾರವಾದುದರಿಂದ, ಆ ಆಂಡಾಳನ್ನು ಸ್ವಾಮಿಯು ಪತ್ನಿಯಾಗಿ ಪರಿಗ್ರಹಿಸಿ, ಸ್ವಾಮಿಗೆ ಇವರು "ಶ್ವಶುರಮಮರವಂದ್ಯಂ ರಂಗನಾಥಸ್ಯ ಸಾಕ್ಷಾತ್" ಎಂಬದಾಗಿ ಹೇಳಿರುವ ಮೇರೆಗೆ ಮಾವಂದಿರಾಗಿ ತುಂಬಾ ಪ್ರಿಯರಾದ ಪ್ರಯುಕ್ತ ವಿಷ್ಣುಚಿತ್ತರು. ಈ ಅಭಿಪ್ರಾಯವನ್ನು ಶ್ರೀ ನಡಾದೂರ್ ನರಸಿಂಹಾಚಾರ್ಯರವರು ತಮ್ಮ ವ್ಯಾಖ್ಯಾನದಲ್ಲಿ ಸೂಚಿಸಿರುತ್ತಾರೆ. ಅಥವಾ ವಿಷ್ಣುಚಿತ್ತರ್ ಎಂಬುದಕ್ಕೆ ವಿಷ್ಣುವನ್ನೇ ಮನಸ್ಸಿನಲ್ಲುಳ್ಳವರೆಂಬದಾಗಲೀ ಅಥವಾ ವಿಷ್ಣುವಿನಲ್ಲೇ ಮನಸ್ಸುಳ್ಳವರೆಂಬದಾಗಿಯೂ ಅರ್ಥವನ್ನು ಹೇಳಬಹುದು.

(6) ತುಯ್ಯಕುಲಶೇಖರರ್—ಪರಿಶುದ್ಧರಾದ ಕುಲಶೇಖರಾಳ್ವಾರ್. ಹೇಗೆ ಪರಿಶುದ್ಧರೆಂದರೆ, ಇವರಿಗೆ ಭಾಗವತರಲ್ಲಿ ತುಂಬಾ ಭಕ್ತಿಯು. "ನಹ್ಯಮ್ಮಯಾನಿ ತೀರ್ಥಾನಿ ನದೇವಾಮೃಚ್ಛಿಲಾಮಯಾಃ । ತೇ ಪುನಂತ್ಯುರುಕಾಲೇನ ದರ್ಶನಾದೇವಸಾಧವಃ ॥" ಎಂಬ ಶುಕಮಹರ್ಷಿಯ ಉಕ್ತಿಗನುಸಾರವಾಗಿ, ಪುಣ್ಯಕ್ಷೇತ್ರಗಳಲ್ಲಿನ ಸ್ವಾಮಿಸೇವೆಗಿಂತಲೂ, ಪುಣ್ಯತೀರ್ಥಗಳಲ್ಲಿ ಅವಗಾಹನೆಮಾಡುವುದ

**ಶೆಯ್ಯ ತಮಿಳ್ ಮಾಲೈಗಳ್ನಾಂ ತೆಳಿಯವೋದಿ,**
**ತ್ತೆಳಿಯಾದನಹ್ಮ್ಯ ನಿಲಂಗಡೆಳಿಗಿ ನ್ರೋಮೆ ॥೧॥**

ಕ್ಕಿಂತಲೂ, ಶೀಘ್ರವಾಗಿ ಭಾಗವತರುಗಳು ಸಂದರ್ಶನಮಾತ್ರದಿಂದಲೇ ಪರಿಶುದ್ಧರನ್ನಾಗಿ ಮಾಡುತ್ತಾರೆಂದು ಹೇಳಿರುವ ಹಾಗೆ, ಭಾಗವತಭಕ್ತಿಯಿಂದ ಪರಿಶುದ್ಧರಾದವರು. ಆದುದರಿಂದಲೇ ಭಾಗವತರ ವಿಷಯದಲ್ಲಿ ಸ್ವಲ್ಪವೂ ದೋಷವನ್ನು ಸಹಿಸದಿರುವರು. ಈ ಆಳ್ವಾರವರು ತಿರುವಾಂಕೂರು ಸಂಸ್ಥಾನದ ರಾಜರಾಗಿದ್ದಾಗ ಭಾಗವತೋತ್ತಮರಾದ ಶ್ರೀವೈಷ್ಣವರಮೇಲೆ ಅವರ ಮಂತ್ರಿಯು ಹೊರಿಸಿದ ಕಳವನ್ನು ನಂಬದೆ ಘಟಸರ್ಪವಿದ್ದ ಕೊಡದಲ್ಲಿ ಬೆರಳನ್ನಿಟ್ಟು ಅವರುಗಳು ನಿರ್ದೋಷಿಗಳೆಂದು ಪ್ರಮಾಣಮಾಡಿದವರಾದುದರಿಂದ "ತುಯ್ಯ ಕುಲಶೇಖರನ್" ಎಂಬದಾಗಿ ಪ್ರಯೋಗಿಸಿರುತ್ತಾರೆ.

(7) "ನಮ್ಮಾಣನಾತನ್" ಅಂದರೆ ನಮ್ಮ ತಿರುಪ್ಪಾಣಾಳ್ವರರೆಂಬರ್ಥವು. "ನಮ್ಮ" ಎಂಬುವದರಿಂದ ಶ್ರೀನಿಗಮಾಂತದೇಶಿಕರವರಿಗೆ ಇವರಲ್ಲಿ ತುಂಬಾ ವಿಶ್ವಾಸವಿದೆಯೆಂಬುದು ತೋರುತ್ತದೆ. ಆಳ್ವಾರ್ರವರು ರಚಿಸಿದ ನಿತ್ಯಾನುಸಂಧಾನಕ್ಕೆ ಯೋಗ್ಯವಾಗಿರುವ ಅಮೋಘವಾದ "ಅಮಲನಾದ ಪಿರಾನ್" ಎಂಬುವದರಿಂದ ಭಕ್ತಿಯು ಹೆಚ್ಚಾಗಿರಬಹುದು. ಆದುದರಿಂದಲೇ ಈ ಗ್ರಂಥಕ್ಕೆ ವ್ಯಾಖ್ಯಾನವಾಗಿ "ಮುನಿವಾಹನಭೋಗ" ವೆಂಬ ರಹಸ್ಯವನ್ನು ಅಪ್ಪಣೆಕೊಡಿಸಿರುತ್ತಾರೆ. ಅಥವಾ ಶ್ರೀರಂಗನಾಥನು ಅನುಗ್ರಹಮಾಡಿ ಈ ಆಳ್ವಾರವರು ಪಂಚಮರ ಮಧ್ಯದಲ್ಲಿ ಬೆಳೆದವರಾದರೂ ಲೋಕಸಾರಂಗಮುನಿಯನ್ನು, ಅವರ ಬೆನ್ನಿನ ಮೇಲೆ ಹೊತ್ತು ತರುವ ಹಾಗೆ ಆಜ್ಞಾಪಿಸಿ, ಆಳ್ವಾರರಿಗೆ ಸೇವೆಯನ್ನಿತ್ತು "ಮುನಿವಾಹನರ್, ನರವಾಹನರ್" ಮೊದಲಾದ ಹೆಸರುಗಳನ್ನು ಹೇಗೆ ಕೊಟ್ಟರೋ, ಹಾಗೆಯೇ ಶ್ರೀರಂಗನಾಥನು ತಮ್ಮನ್ನು ಸನ್ನಿಧಿಗೆ ಬರಮಾಡಿಕೊಂಡು, "ಶ್ರೀರಂಗರಾಜದಿವ್ಯಾಜ್ಞಾಲಬ್ಧವೇದಾಂತಾಚಾರ್ಯಪದಃ" ಎಂಬದಾಗಿಯೂ, "ತೇನ ದೇವೇನ ದತ್ತಾಂ ವೇದಾಂತಾಚಾರ್ಯಸಂಜ್ಞಾಂ" ಎಂಬದಾಗಿಯೂ,

ತಾವೇ ಹೇಳಿಕೊಂಡಿರುವ ರೀತ್ಯಾ, "ವೇದಾಂತಾಚಾರ್ಯ"ರೆಂಬ ಬಿರುದನ್ನೂ, ಹಾಗೆಯೇ ಲೋಕಮಾತೆಯಾದ ಶ್ರೀರಂಗನಾಯಕಿಯೂ ಇವರಿಗೆ "ಸರ್ವತಂತ್ರಸ್ವತಂತ್ರ"ರೆಂಬ ಬಿರುದನ್ನೂ ದಯಪಾಲಿಸಿ ರುವದರಿಂದ, ತಮ್ಮಿಬ್ಬರವಿಷಯದಲ್ಲೂ ಲೋಕದಂಪತಿಗಳಿಗೆ ಪೂರ್ಣಾ ನುಗ್ರಹವೆಂಬುದನ್ನು ಸೂಚಿಸುವದಕ್ಕಾಗಿ "ನಂ" ಪ್ರಾಣನಾತರ್ ಎಂಬದಾಗಿ ಪ್ರಯೋಗಿಸಿರುತ್ತಾರೆ. ಇಲ್ಲಿ "ಪ್ರಾಣ" ಶಬ್ದಕ್ಕೆ ದಿವ್ಯ ಗಾನವೆಂದು ಹೆಸರು. ಭಗವದ್ವಿಷಯಕ ಪಾಶುರಗಳಿಂದ ಅನೋಘ ವಾದ ಗಾನಮಾಡಿ ಗಾನವಿಶಾರದರಾಗಿದ್ದುದರಿಂದ "ಪ್ರಾಣನಾತರ್" ಎಂಬ ಪ್ರಯೋಗಕ್ಕೆ ಕಾರಣವಾಗಿರುತ್ತದೆ. ಹಾಗೆಯೇ ದಿವ್ಯಪ್ರಬಂಧ ವೆಲ್ಲಾ ದಿವ್ಯಗಾನರಸಪರಿಪೂರ್ಣವಾದುದೆಂಭಿಪ್ರಾಯವು.

(8) "ತೊಂಡರಡಿಪ್ಪೊಡಿ"—ತೊಂಡರ್-ಭಕ್ತರ, ಭಾಗವತರ, ಅಡಿ - ಕಾಲಿನ, ಪೊಡಿ - ಧೂಳು. ತಮ್ಮನ್ನು ಭಾಗವತರ ಕಾಲಿನ ಧೂಳಾಗಿ ಹೇಳಿಕೊಂಡವರು ; ಆದುದರಿಂದ ಇವರಿಗೆ "ಭಕ್ತಾಂಘ್ರಿ ರೇಣು" ಎಂಬವಾಗಿಯೂ ಹೆಸರು. ಇವರ ಸರಿಯಾದ ಹೆಸರು "ವಿಪ್ರನಾರಾಯಣ"ರೆಂಬದಾಗಿದ್ದರೂ, ಭಾಗವತರ ಶ್ರೀಪಾದತೀರ್ಥ ದಿಂದ ಇವರು ಪವಿತ್ರತೆಯನ್ನು ಹೊಂದಿ ಸ್ವಾಮಿ ಶ್ರೀರಂಗನಾಥನ ಕೃಪೆಯಿಂದುಂಟಾದ ಭಕ್ತಾಂಘ್ರಿರೇಣುವೆಂಬ ಹೆಸರಾದುದರಿಂ ದಲೂ, ಭಾಗವತ ಶ್ರೀಪಾದತೀರ್ಥದ ಮಹಿಮೆಯನ್ನು ಇವರು ಕೊಂಡಾಡಿದುದರಿಂದಲೂ, ಅವರು ರಚಿಸಿದ "ತಿರುಪ್ಪಳ್ಳಿಯೆಳುಚ್ಚಿ" ಯಲ್ಲಿ "ಉನ್ನಡಿಯಾರ್‌ಕ್ಕಾಳ್‌ಪಡಿತ್ತಾಯ್" ಎಂಬದಾಗಿ ಹೇಳಿ ಕೊಂಡಿರುವದರಿಂದಲೂ, ತೊಂಡರಡಿಪ್ಪೊಡಿ ಎಂಬ ನಾಮಧೇಯ ವನ್ನೇ ಮುಖ್ಯವಾಗಿ ಗ್ರಹಿಸಿರುತ್ತಾರೆ.

(9) ಮಳಿಶೈವಂದಶೋತಿ—ಮಳಿಶೈ ಅಂದರೆ ಮಹೀಸಾರ ಪುರಿಗೆ (ಇದಕ್ಕೆ ವ್ಯಾಘ್ರಪುರಿ, ಪೆರುಂಬುಲಿಯೂರ್ ಎಂಬ ಹೆಸರು ಗಳುಂಟು), ವಂದ - ಬಂದಂಥಾ, ಶೋತಿ - ಜ್ಯೋತಿಸ್ಸು, ತೇಜಸ್ಸು. ಅಂದರೆ ತಿರುಮಳಿಶೈಯ್ಯಾಳ್ವಾರವರು. ಇವರಿಗೆ ಭಕ್ತಿಸಾರಮುನಿ ಎಂಬ ನಾಮಧೇಯವೂ ಉಂಟು. ಇವರು ಚಕ್ರಾಳ್ವಾರವತಾರ

ವಾಗಿ ಜನಿಸಿದವರು. ಒಂದು ಯಾಗ ಸಭೆಯಲ್ಲಿ ಋತ್ವಿಕ್ಕುಗಳಿಂ ದುಂಟಾದ ಅವಮಾನವನ್ನು ಸಹಿಸದೆ, ಶಿಶುಪಾಲನ ಅಮರ್ಯಾದೆ ಯನ್ನು ಸಹಿಸದೆ ಶ್ರೀಕೃಷ್ಣನಿಂದುಂಟಾದ ತೇಜಸ್ಸಿನ ಹಾಗೆ, ಈ ಆಳ್ವಾರವರಿಂದ ಒಂದು ತೇಜಸ್ಸು ಹುಟ್ಟಿ ಅವಮರ್ಯಾದೆಮಾಡಿದ ವರನ್ನು ನಿಗ್ರಹಿಸಿತೆಂಬ ವೃತ್ತಾಂತಾನುಸಾರವಾಗಿ " ಶೋತಿ " ಎಂಬ ದಾಗಿ ಪ್ರಯೋಗಿಸಿರುತ್ತಾರೆ.

(10) ವೈಯಮೆಲ್ಲಾಂ - ಲೋಕದಲ್ಲೆಲ್ಲಾ, ಮರೈ - ವೇದವು, ವಿಳಂಗ - ಪ್ರಕಾಶಿಸುವ ಹಾಗೆ, ವಾಳ್ - ಖಡ್ಗವನ್ನೂ, ವೇಲ್ - ಕುಂತವೆಂಬ ಆಯುಧವಿಶೇಷವನ್ನೂ, ಏಂದುಂ - ಧರಿಸಿದಂಥಾ, ಮಂಗ ಯರ್‌ಕೋನ್ - ತಿರುಮಂಗೈ ಎಂಬ ದಿವ್ಯಸ್ಥಳಕ್ಕೆ ನಿರ್ವಾಹಕರಾಗಿ ಸ್ವಾಮಿ ಎನಿಸಿದ ತಿರುಮಂಗೈಯಾಳ್ವಾರು (ಇವರು ವೇದಗಳಲ್ಲಿ ಅಭಿ ಮಾನವಿಲ್ಲದವರನ್ನು ನಿಗ್ರಹಿಸಿ ಎಲ್ಲರಿಗೂ ವೇದಗಳಲ್ಲಿ ಅಭಿಮಾನ ವುಂಟಾಗುವ ಹಾಗೆ ಮಾಡುವದಕ್ಕಾಗಿ ಖಡ್ಗ ಮೊದಲಾದ ಆಯುಧಗ ಳನ್ನು ಧರಿಸಿದರೆಂದು ಭಾವವು. ದೇವಭಾಗವತ ಕೈಂಕರ್ಯಕ್ಕಾಗಿ ಅವೈಷ್ಣವರಲ್ಲಿದ್ದ ಹಣವನ್ನು ಸಂಗ್ರಹಿಸುವದಕ್ಕಾಗಿಯೂ ಆಯುಧ ಗಳನ್ನು ಧರಿಸಿದವರು. ಇವರ ಅಸದೃಶವಾದ ಭಕ್ತಿಗೆ ಸ್ವಾಮಿಯು ಮೆಚ್ಚಿ ಇವರಿಗೆ ಮೂಲಮಂತ್ರ ಮೊದಲಾದ ಉಪದೇಶವನ್ನು ಸ್ವತಃ ಮಾಡಿರುತ್ತಾರೆ. ಆದರೆ ಆಚಾರ್ಯೋಪದೇಶವನ್ನು ಸಂಗ್ರ ಹಿಸಲು ಸಮಿತ್ಪಾಣಿಯಾಗಿ ಹೋಗಿ, ದ್ರವ್ಯವನ್ನು ಕೊಟ್ಟು ಶಿಷ್ಯನು, ಬ್ರಹ್ಮಜ್ಞಾನವನ್ನು ಪಡಿಯತಕ್ಕದ್ದು ; ಆದರೆ ಇವರು ಆಯುಧಗಳನ್ನು ಧರಿಸಿ ಲಕ್ಷ್ಮಿಯಮ್ಮೆಮೇಲಿದ್ದ ಆಭರಣಗಳನ್ನು ತಾವೇ ಸಂಗ್ರಹಿಸಿದಾಗ ಉಪದೇಶಹೊಂದಿದುದು ಪರಮಾಶ್ಚರ್ಯವೆಂ ದು ಸೂಚಿಸುವುದಕ್ಕಾಗಿಯೂ "ವಾಳ್‌ವೇಲೇಂದುಂ" ಎಂಬದಾಗಿ ಪ್ರ ಯೋಗಿಸಿರುತ್ತಾರೆಂಬದಾಗಿಯೂ ಭಾವಿಸಬಹುದು. ಹೀಗೆ ಆಯುಧ ಗಳನ್ನು ಧರಿಸಿ ಶತ್ರುಗಳಿಗೆ ಭಯಂಕರವಾಗಿದ್ದದರಿಂದ ಇವರಿಗೆ " ಪರ ಕಾಲ "ರೆಂದೂ ಹೆಸರು.

**ಎನ್ರಿವರ್‌ಗಳ್ - ಎಂಬುವ ಈ ಹತ್ತು ಆಳ್ವಾರುಗಳಿಂದ,**

ಮಕಳಿಂದು - ಭಗವದನುಗ್ರಹದಿಂದುಂಟಾದ ಪ್ರೀತ್ಯತಿಶಯದಿಂದ, ಪಾಡುಂ - ದಿವ್ಯಗಾನದಿಂದ ಹಾಡಲ್ಪಟ್ಟ, ಶೆಯ್ಯ - ಇತರ ಸಿದ್ಧಾಂತಗಳಲ್ಲಿರುವ ಹಾಗೆ, ಭ್ರಾಂತಿಭ್ರಮವಾದಗಳು, ಸ್ವಾಮಿಗೆ ಅವಿದ್ಯಾಕಲ್ಪನೆಯು, ಜಗನ್ಮಿಥ್ಯಾವಾದವು, ಮೊದಲಾದ ಅಜ್ಞಾನ, ಅನ್ಯಥಾ ಜ್ಞಾನ, ವಿಪರೀತಜ್ಞಾನಗಳೊಂದೂ ಇಲ್ಲದೆ ಋಜುಭಾವವನ್ನು ಹೊಂದಿರುವ, ತಮಿಳ್‌ಮಾಲೆಗಳ್ - ಸ್ವಾಮಿಗೆ ಬಹುಭೋಗ್ಯವಾಗಿರುವ, ಮೂಲಾರೂಪದಲ್ಲಿರುವ ನಾಲ್ಕುಸಾವಿರ ದ್ರಾವಿಡ ಪ್ರಬಂಧಗಳನ್ನು, ನಾಂ - ಅಗಸ್ತ್ಯಭಾಷೆಯಾದ ತಮಿಳಭಾಷೆಯನ್ನು ಕಲಿತು ವೈಷ್ಣವಯೋನಿಯಲ್ಲಿ ಜನಿಸಿ ಅಂತಹ ದ್ರಾವಿಡಪ್ರಬಂಧಗಳನ್ನು ಅಧಿಕರಿಸುವ ಸುಕೃತವಿಶೇಷವನ್ನು ಹೊಂದಿರುವ ನಾವುಗಳು, ತೆಳಿಯಓದಿ - ಆಚಾರ್ಯಮುಖೇನ ಉಚ್ಚಾರಣಾನೂಚ್ಚಾರಣಪೂರ್ವಕವಾಗಿ ಅಧ್ಯಯನಮಾಡಿ ಅನಂತರ ಅರ್ಥಸ್ವಾರಸ್ಯವನ್ನು ಗ್ರಹಿಸಿ, ತೆಳಿಯುವ ಮರೈನಿಲಂಗಳ್- ಉಪನಿಷತ್ತಿನಲ್ಲಿ ಕೂಡ ಕ್ಲಿಷ್ಟವಾಗಿ ತಿಳಿಯದೇ ಇರುವ ಭಾಗಗಳನ್ನು, ತೆಳಿಗಿನ್ರೋಮೆ - ಈ ದ್ರಾವಿಡಪ್ರಬಂಧಗಳಲ್ಲಿ ಬಹುಸುಲಲಿತವಾಗಿ ಚನ್ನಾಗಿ ವಿಶದವಾಗಿ ಕರತಲಾಮಲಕವಾಗುವಹಾಗೆ ತಿಳಿದೆವಷ್ಟೆ. ಇಷ್ಟು ಉಪಕಾರವನ್ನು ಇವರುಗಳು ಮಾಡಿರುತ್ತಾರೆಂದು ತಾತ್ಪರ್ಯವು. ಉಪನಿಷತ್ತುಗಳಲ್ಲೂ ಅಷ್ಟು ಚನ್ನಾಗಿ ಅರ್ಥವಾಗದ ಭಾಗಗಳನ್ನು ಬಹುಸ್ವಾರಸ್ಯವಾಗಿ ಮುಂದಟ್ಟಾಗುವಹಾಗೆ ಭಕ್ತಿರಸದಿಂದ ತುಂಬಿ ತುಳುಕುವ ಹಾಗೆ ಈ ಆಳ್ವಾರುಗಳು ಅನುಗ್ರಹಿಸಿದ ಗ್ರಂಥಗಳ ಪರಿಶೀಲನದಿಂದ ತಮಗೆ ಉಭಯಕವಿತಾವಿಶಾರದರೆಂಬ ಖ್ಯಾತಿ ಉಂಟಾಯಿತಲ್ಲಾ ಎಂಬ ಕೃತಜ್ಞತಾಭಾವದಿಂದ ಈ ಆಳ್ವಾರುಗಳನ್ನು ಕೊಂಡಾಡಿದ್ದು ಪಾಶುರವಾಗಿರುತ್ತದೆ.

## ಮೇಲೆ ಹೇಳಿದ ಹತ್ತು ಆಳ್ವಾರುಗಳ ಸಂಗ್ರಹಚರಿತ್ರೆಯು

1. ಪೊಯ್‌ಕೈಯಾಳ್ವಾರ್—ಇವರು ದ್ವಾಪರಯುಗದಲ್ಲಿ ಸಿದ್ಧಾರ್ಥಿಸಂವತ್ಸರದ ಅಲ್ಪಿಸಿ ಮಾಸದ ಶುಕ್ಲಪಕ್ಷದ ಅಷ್ಟಮಿ ಮಂಗಳವಾರ ಶ್ರವಣನಕ್ಷತ್ರದಲ್ಲಿ ಪಾಂಚಜನ್ಯವೆಂಬ ವಿಷ್ಣುವಿನ ಶಂಖಾಂಶ

ರಾಗಿ ಕಾಂಚೀಪುರದಲ್ಲಿ ಪೊಯ್‌ಕೈ ಪುಷ್ಕರಣಿಯ ಒಂದು ಕಮಲ ಪುಷ್ಪದಲ್ಲಿ ಅವತರಿಸಿದರೆಂಬ ಪ್ರತೀತಿಯುಂಟು. ಇವರನ್ನು ಪೊಯ್‌ಕೈಮುನಿ ಎಂದೂ ಹೇಳುತ್ತಾರೆ. ಮುನಿ ಎಂದರೆ ಉಪಾಸನಾರೂಪವಾದ ಮನನದಲ್ಲಿ ಆಸಕ್ತಿಯುಳ್ಳವರೆಂದು ಭಾವವು.

೨. ಪೂದತ್ತಾಳ್ವಾರವರು— ಇವರು ಪೊಯ್‌ಕೈಮುನಿ ಹುಟ್ಟಿದ ಮಾರನೇ ದಿನ ಹುಟ್ಟಿದವರು. ಆದ್ದರಿಂದ ಸಿದ್ಧಾರ್ಥಿಸಂವತ್ಸರದ ಅಲ್ಪಿಸಿಮಾಸ ಶುಕ್ಲಪಕ್ಷ ನವಮಿ ಬುಧವಾರ ಧನಿಷ್ಠಾನಕ್ಷತ್ರದಲ್ಲಿ ವಿಷ್ಣುವಿನ ಗದಾಂಶರಾಗಿ, ತಿರುಕ್ಕಡಲ್‌ಮಲ್ಲೆಯಲ್ಲಿ ಮಾದವಿಹೂವಿನಲ್ಲಿ ಅವತರಿಸಿದರು. ಇವರಿಗೆ ಭೂತಮುನಿ ಎಂಬ ಹೆಸರುಂಟು. ಭೂತ ಎಂದರೆ ನಿತ್ಯಸೂರಿ, ನಿತ್ಯಸೂರಿಗಳಹಾಗೆ ಇವರಿದ್ದುದರಿಂದ ಆ ಹೆಸರು ಬಂತು.

3. ಪೇಯಾಳ್ವಾರ್— ಇವರು ಪೂದತ್ತಾಳ್ವಾರ್ ಅವತರಿಸಿದ ಮಾರನೇ ದಿನ ಅವತರಿಸಿದವರು. ಆದುದರಿಂದ ಸಿದ್ಧಾರ್ಥಿಸಂವತ್ಸರದ ಅಲ್ಪಿಸಿ ಮಾಸ ಶುಕ್ಲಪಕ್ಷ ದಶಮಿ ಬೃಹಸ್ಪತಿವಾರ ಶತಭಿಷಾ ನಕ್ಷತ್ರದಲ್ಲಿ ವಿಷ್ಣುವಿನ ನಂದಕವೆಂಬ ಖಡ್ಗಾಂಶರಾಗಿ ಮಯೂರಪುರಿಯಲ್ಲಿ ಕನ್ನೈದಿಲೆ ಹೂವಿನಲ್ಲಿ ಅವತರಿಸಿದರು.

ಸಮಾನ ವಯಸ್ಕರಾದ ಈ ಮೂವರೂ ದಿವ್ಯದೇಶಯಾತ್ರೆಗಳನ್ನು ಮಾಡುತ್ತಾ ತಿರುಕ್ಕೋವಲೂರೆಂಬ ಸ್ಥಳದಲ್ಲಿ ಮೂವರೂ ಒಟ್ಟಿಗೆ ಸೇರಿರುವಾಗ, ತಮ್ಮ ಜ್ಞಾನಚಕ್ಷುಸ್ಸಿನ ಮೂಲಕ ಲೋಕಮಾತೆಯಂ ಪ್ರಾರ್ಥಿಸಿ, ಆ ಪುರುಷಕಾರಮೂಲಕವಾಗಿ ಶ್ರೀಯಃಪತಿಯ ದಿವ್ಯಸ್ವರೂಪವನ್ನು ಕಂಡವರಾಗಿ ತಮ್ಮಗಳನುಭವವನ್ನು ದ್ರಾವಿಡ ಪ್ರಬಂಧರೂಪದಲ್ಲಿ ರಚಿಸಿರುತ್ತಾರೆ.

ಪೊಯ್‌ಕೈಆಳ್ವಾರವರು ರಚಿಸಿದುದು. ವಯ್ಯಂತಹಳಿಯಾ ಎಂಬುವ ಮೊದಲ್‌ತಿರುವಂದಾದಿ. ಪಾಶುರಗಳು ೧೦೦.

ಪೂದತ್ತಾಳ್ವಾರವರು ರಚಿಸಿದುದು. ಅನ್ಬೇತಹಳಿಯಾ ಎಂಬುವ ಇರಂಡಾಂ ತಿರುವಂದಾದಿ. ಪಾಶುರಗಳು ೧೦೦.

ಪೇಯಾಳ್ವರವರು. ತಿರುಕ್ಕಂಡೇನ್ ಎಂಬುವ ಮೂನ್ರಾಂ ತಿರುವಂದಾದಿ. ಪಾಶುರಗಳು ೧೦೦.

೪. ನಮ್ಮಾಳ್ವಾರ್—ಪೂರ್ವಾಚಾರ್ಯರುಗಳಲ್ಲಿ ಇವರಿಗೆ ಹೆಚ್ಚಾದ ಮರ್ಯಾದೆಯುಂಟು. ಇವರು "ವೇದಂತಮಿಳ್ ಶೆಯ್ದ" ಎಂಬುವಹಾಗೆ ವೇದಗಳರ್ಥಗಳನ್ನೆಲ್ಲಾ ಉಪಪಾದಿಸಿಯೂ, ಭಕ್ತಿರಸವು ತುಂಬಿತುಳುಕುವಹಾಗೆಯೂ, ಶರಣಾಗತಿಧರ್ಮ ಸಾರಭೂತವಾಗಿಯೂ, ೧೧೦೨ ಪಾಶುರಗಳುಳ್ಳ ತಿರುವಾಯ್‌ಮೊಳಿಯನ್ನೂ ರಚಿಸಿ, ದ್ರಾವಿಡಪ್ರಬಂಧಗಳಲ್ಲಿ ಇದಕ್ಕೆ ತುಂಬಾ ಪ್ರಾಮುಖ್ಯತೆ ಬಂದಿರುವದರಿಂದ ಇವರಿಗೆ ಗೌರವಹೆಚ್ಚು. ಇವರು ಸೇನೇಶಾಂಶರಾಗಿ ಕಲಿ ೪೩ನೇ ವರ್ಷ ಪ್ರಮಾಥಿ ಸಂವತ್ಸರದ ವೈಯ್ಯಾಶಿಮಾಸ ಪೂರ್ಣಿಮಾ ಶುಕ್ರವಾರ ವಿಶಾಖಾನಕ್ಷತ್ರದಲ್ಲಿ ಹುಟ್ಟಿದರು. ಅವತಾರ ಸ್ಥಳ ಕುರುಕಾಪುರಿ. ಈಗ ಇದಕ್ಕೆ ಆಳ್ವಾರ್‌ತಿರುನಗರೀ ಎಂಬ ಹೆಸರಿರುತ್ತದೆ. ತಾಮ್ರಪರ್ಣೀನದೀತೀರದಲ್ಲಿ ದಿವ್ಯಯಾತ್ರಾಸ್ಥಳವಾಗಿರುತ್ತದೆ. ಇವರು ಶೂದ್ರಜಾತಿಯವರಾದ ಕಾರಿ, ಉಡೈಯನಂಗಿಯವರಿಗೆ ಮಕ್ಕಳು. ಇವರುಗಳು ಈ ಬಾಲರಿಗೆ ಮಾರನ್ ಎಂಬ ಹೆಸರನ್ನಿಟ್ಟು ಸಾಕಲಾಗಿ ೧೬ ವರುಷಗಳವರಿವಿಗೂ ಮಾತಿಲ್ಲದೆ ಕುರುಡರಹಾಗೆ, ಆದಿನಾಥನ ಸನ್ನಿಧಿಯಲ್ಲಿ ಆದಿಶೇಷಾಂಶವಾದ ತಿರುಪ್ಪುಳಿ (ಹುಣಿಸೇಮರ) ವೃಕ್ಷದ ನೆರಳಿನಲ್ಲಿ ಇರುತ್ತಿದ್ದರು. (ಈ ಹುಣಿಸೇಮರವು ಈಗಲೂ ಆಳ್ವಾರ್‌ತಿರುನಗರಿಯಲ್ಲಿ ಆದಿನಾಥನ ಸನ್ನಿಧಿಪಕ್ಕದಲ್ಲಿ ಇರುತ್ತದೆ. ಅದರ ಕೆಳಗೇನೆ ಮಧುರಕವಿಯಾಳ್ವಾರವರಿಂದ ಪ್ರತಿಷ್ಠಿತವಾದ ನಮ್ಮಾಳ್ವಾರ್ ಸನ್ನಿಧಿ ಇರುತ್ತದೆ.) ಆಗ ಲೋಕಜನನಿಯ ಕಟಾಕ್ಷಕ್ಕೆ ಇವರು ಪಾತ್ರರಾಗಿ। ಆಕೆಯು ತನ್ನ ಪತಿಯನ್ನು ಕುರಿತು ಲೋಕದ ಜನರುಜ್ಜೀವಿಸಲು ಏನಾದರೂ ಒಂದು ಉಪಾಯವನ್ನು ಕಲ್ಪಿಸಕೂಡದೇ ಎಂಬದಾಗಿ ಪ್ರಾರ್ಥಿಸಲು, ಆಗ ಸ್ವಾಮಿಯು ಸೇನೇಶರನ್ನು ಕರೆದು, ನಿನ್ನಂಶಭೂತನಾದ ಮಾರನಿಗೆ ಸಕಲ ಶಾಸ್ತ್ರಾರ್ಥಗಳನ್ನುಪದೇಶಿಸಿ, ಅವರಿಂದ ಲೋಕೋಪಕಾರವಾಗುವ ಹಾಗೆ ಮಾಡ

ಬೇಕೆಂದು ಆಜ್ಞಾಪಿಸಲಾಗಿ ಆ ಸೇನೇಶರ ಕರುಣೆಯಿಂದ ಈ ಆಳ್ವಾರ ವರು ಬಹುಜ್ಞಾತಾವಾಗಿ ಶಾಸ್ತ್ರರಹಸ್ಯಂಗಳನ್ನೆಲ್ಲಾ ತಿಳಿದು ಬ್ರಹ್ಮವಿತ್ತಾಗಿದ್ದರು.

5. ಮಧುರಕವಿಯಾಳ್ವಾರ್—ಕುಮುದಾಂಶಭೂತರಾಗಿ ದ್ವಾಪರಯುಗದಲ್ಲಿ ಈಶ್ವರಸಂವತ್ಸರದ ಚೈತ್ರಮಾಸಂ ಶುಕ್ಲಪಕ್ಷ ಚತುರ್ದಶೀ ಶುಕ್ರವಾರ ಚಿತ್ರಾನಕ್ಷತ್ರದಲ್ಲಿ ತಿರುಕ್ಕೋಳೂರು ಕ್ಷೇತ್ರದಲ್ಲಿ ಅವತರಿಸಿದರು. ಇವರು ಬ್ರಾಹ್ಮಣ ಸಂತತಿಯವರು. ಇವರು ಸಕಲ ವೇದವೇದಾಂಗಗಳನ್ನೂ ಅಧ್ಯಯನಮಾಡಿದವರಾಗಿ, ದಿವ್ಯದೇಶಯಾತ್ರೆಮಾಡುವದಕ್ಕಾಗಿ ಶ್ರೀರಾಮಾವತಾರಸ್ಥಳವಾದ ತಿರುವಯೋಧ್ಯೆಗೆ ಬಂದು ಸೇರಿದರು. ಅಲ್ಲಿ ತಾವು ಜನಿಸಿದ ತಿರುಕ್ಕೋಳೂರ್‌ಸ್ವಾಮಿಯನ್ನು ಮನಸಾಧ್ಯಾನಿಸಿದವರಾಗಿ, ಆ ದಿಕ್ಕನ್ನು ನೋಡಲಾಗಿ, ಆಕಡೆ ಒಂದು ದಿವ್ಯತೇಜಃಪುಂಜವನ್ನು ಕಂಡರು. ಇದೇನಿರಬಹುದೆಂದು ತಿಳಿಯಬೇಕೆಂಬ ಕುತೋಹಲದಿಂದ, ಆತೇಜಸ್ಸನ್ನನುಸರಿಸಿಯೇ ದಕ್ಷಿಣಕ್ಕೆ ಸಂಚರಿಸಿ ಬರುವವರಾಗಿ, ಕೊನೆಗೆ ಆಳ್ವಾರು ತಿರುನಗರಿಯ ಹುಣಿಸೇಮರದವರಿವಿಗೂ ಬಂದರು. ಆಗ ಮರದ ಕೆಳಗಿದ್ದ ನಮ್ಮಾಳ್ವಾರವರ ಸಂದರ್ಶನವನ್ನು ಮಾಡಿ ಆನಂದಭರಿತರಾಗಿ ಪ್ರಣಾಮಗಳನ್ನೆಸಗಿ ಪ್ರಶ್ನೆಮಾಡಿದರೇನೆಂದರೆ—"ಶಿರಿಯದು ವಯತ್ತಿಲೆ ಪೆರಿಯದು ಪಿರಂದಾಲ್ ಎತ್ತೈ ತಿನ್ರು ಎಂಗೆ ಕಿಡಕ್ಕುಂ" ಸಣ್ಣದರ ಹೊಟ್ಟೆಯಲ್ಲಿ ದೊಡ್ಡದು ಆವಿರ್ಭವಿಸಿದರೆ ಯಾವದನ್ನು ತಿಂದುಕೊಂಡು ಎಲ್ಲಿ ಇರುತ್ತದೆ ಎಂಬುದು ಈ ಪ್ರಶ್ನೆಯರ್ಥವು. "ಚಿಕ್ಕದಾದ ಅಣುಸ್ವರೂಪನಾದ ಜೀವನಲ್ಲಿ ಧರ್ಮಭೂತಜ್ಞಾನವು ವಿಭುವಾಗಿ ವಿಕಾಸವನ್ನು ಸ್ವಾಮಿಕಟಾಕ್ಷದಿಂದ ಹೊಂದಿದರೆ, ಯಾವದನ್ನನುಭವಿಸುತ್ತಾ ಎಲ್ಲಿ ಅಂತಹ ಜೀವನು ವಸಿಸುವನು" ಎಂಬುದು ವಾಸ್ತವಿಕಾರ್ಥವು. ಈ ಪ್ರಶ್ನೆಗೆ ನಮ್ಮಾಳ್ವಾರವರು "ಅತ್ತೈ ತಿನ್ರು ಅಂಗೇಕಿಡಕ್ಕುಂ" ಅದನ್ನು ತಿಂದುಕೊಂಡು ಅಲ್ಲೇ ಬಿದ್ದಿರುತ್ತದೆ ಎಂಬಸಾಧಾರಣಾರ್ಥ ಬರುವ ಉತ್ತರವನ್ನು ಹೇಳಿದರು. "ಅತ್ತೈ-ಅಕಾರವಾಚ್ಯನಾದ ಶ್ರೀಮನ್ನಾರಾಯಣನನ್ನನುಭವಿಸುತ್ತಾ, ಆ ಶ್ರೀಮನ

ನಿರುವ ದಿವ್ಯ ವೈಕುಂಠದಲ್ಲೇ ಪುನರಾವರ್ತಿ ಭಯವಿಲ್ಲದೆ ಅಲ್ಲಿಯೇ ಸ್ಥಿರವಾಗಿರುವವನು" ಎಂಬ ಅಮೋಘಾರ್ಥಗರ್ಭಿತವಾದ ಉತ್ತರವನ್ನು ಹೇಳಿದರು. ಈ ಉತ್ತರಕ್ಕೆ ಮಧುರಕವಿಯಾಳ್ವಾರವರು ಪರಮಸಂತುಷ್ಟರಾಗಿ ಅವರಲ್ಲೇ ನಿಂತು ವೇದಸಾರವನ್ನೆಲ್ಲಾ ಉಪದೇಶಿಸಬೇಕೆಂದು ಪ್ರಾರ್ಥಿಸಲಾಗಿ, ನಮ್ಮಾಳ್ವಾರವರು ಕೃಪೆಮಾಡಿ, ಋಗ್ವೇದಸಾರವನ್ನೆಲ್ಲಾ ೧೦೦ ಪಾಶುರಗಳುಳ್ಳ ತಿರುವರುತ್ತಂ ಎಂಬದಾಗಿಯೂ ಯಜುರ್ವೇದಸಾರವನ್ನು ೭ ಪಾಶುರುಗಳುಳ್ಳ ತಿರುವಾಶರಿಯಂ ಎಂಬದಾಗಿಯೂ ಅಥರ್ವವೇದಾರ್ಥವನ್ನು ೮೭ ಪಾಶುರಗಳುಳ್ಳ ಪೆರಿಯತಿರುವಂದಾದಿ ಎಂಬದಾಗಿಯೂ ಸಾಮವೇದಾರ್ಥಸಾರವನ್ನೆಲ್ಲಾ ೧೧೦೨ ಪಾಶುರಗಳುಳ್ಳ ತಿರುವಾಯ್ಮೊಳಿ ಎಂಬದಾಗಿಯೂ ರಚಿಸಿ ಸ್ವಾರಸ್ಯವಾಗಿ ಅರ್ಥದೊಂದಿಗೆ ಅವರಿಗೆ ಅನುಗ್ರಹಿಸಿ ಲೋಕವಿಖ್ಯಾತಿಯನ್ನು ಪಡೆದರು.

ಇಷ್ಟು ಪರಮೋಪಕಾರಮಾಡಿದ ನಮ್ಮಾಳ್ವಾರವರಲ್ಲಿ ಇವರಿಗೆ ಭಕ್ತಿಯು ಅನಾದೃಶವಾದುದರಿಂದ, ಇದಕ್ಕಾಗಿ "ಕಣ್ಣಿನುಣ್ ಶಿರುತ್ತಾಂಬು" ಎಂಬುವ ೧೧ ಪಾಶುರಗಳಿಂದ ನಮ್ಮಾಳ್ವಾರವರನ್ನು ವಿಶೇಷ ಕೊಂಡಾಡಿ ಭಾಗವತಾಚಾರ್ಯಪ್ರತಿಪತ್ತಿ ಉಂಟಾಗುವಹಾಗೆ ಬಹು ಸ್ವಾರಸ್ಯವಾಗಿ ರಚಿಸಿರುವದರಿಂದ ಈ ಗ್ರಂಥವು ಪ್ರತಿನಿತ್ಯವೂ ಭಾಗವತಗೋಷ್ಠಿಯಿಂದ ನಿತ್ಯಾನುಸಂಧಾನಕ್ಕೆ ಯೋಗ್ಯವಾಗಿರುತ್ತದೆ ಅನಂತರ ಮಧುರಕವಿಯಾಳ್ವಾರವರು ತಮ್ಮ ಗುರುವಾದ ನಮ್ಮಾಳ್ವಾರವರನ್ನು ಆ ಹುಣಿಸೇಮರದಕೆಳಗೆಯೇ ಪ್ರತಿಷ್ಠೆಮಾಡಿ ಅಮೋಘವಾಗಿ ಇವರಿಗೆ ಅರ್ಚೆಯು ನಡಿಯುವ ಹಾಗೆ ಮಾಡಿರುತ್ತಾರೆ. ಈಗಲೂ ಬಹು ಭಾಗವತಗೋಷ್ಠಿಯು ಆಳ್ವಾರ್‌ತಿರುನಗರಿಗೆ ಯಾತ್ರಾರ್ಥವಾಗಿ ಹೋಗಿ ಸ್ವಾಮಿ ಆದಿನಾಥನನ್ನೂ ನಮ್ಮಾಳ್ವಾರ್ರವರನ್ನೂ ಸೇವೆಮಾಡಿಬರುತ್ತಾರೆ.

6. ಪೆರಿಯಾಳ್ವಾರ್—ಇವರು ವೈನತೇಯಾಂಶರು. ಅವತಾರಸ್ಥಳ ಶ್ರೀವಿಲ್ಲಿಪುತ್ತೂರ್. ಇದು ಪ್ರಸಿದ್ಧ ಯಾತ್ರಾಸ್ಥಳವು ಇವರು ಕಲಿಶಕ ೪೭ನೇದಾದ ಕ್ರೋಧನಸಂವತ್ಸರದ ಆನಿಮಾಸ ಶುಕ್ಲಪಕ್ಷ

ಏಕಾದಶೀಭಾನುವಾರ ಸ್ವಾತೀನಕ್ಷತ್ರದಲ್ಲಿ ಒಬ್ಬ ಶ್ರೀವೈಷ್ಣವರಿಗೆ ಕುಮಾರರಾಗಿ ಜನಿಸಿದರು. ಇವರು ವೇದಮೊದಲಾದ ಶಾಸ್ತ್ರಗಳಲ್ಲಿ ತುಂಬಾ ಜ್ಞಾನವನ್ನು "ಗುರುಮುಖಮನಧೀತ್ಯ" ಎಂದು ಹೇಳಿರುವ ಹಾಗೆ ಗುರುವಿನ ಸಹಾಯವಿಲ್ಲದೆ, ಪರಮಗುರುವಾದ ಶ್ರೀಮನ್ನಾರಾಯಣನ ಕಟಾಕ್ಷದಿಂದ ಪಡದವರಾಗಿ ಶ್ರೀವಿಲ್ಲಿಪುತ್ತೂರ್ ರಂಗಮನ್ನಾರ್ ಸ್ವಾಮಿಗೆ ತುಳಸೀಪುಷ್ಪಮಾಲಾಕೈಂಕರ್ಯವನ್ನು ಮಾಡುತ್ತಿದ್ದರು. ಹೀಗಿರುವಲ್ಲಿ ಪಾಂಡ್ಯದೇಶದ ಧೊರೆಯಾದ ಮಧುರೆಯಲ್ಲಿದ್ದ ವಲ್ಲಭದೇವರಾಯನು ತತ್ವಹಿತಪುರುಷಾರ್ಥವನ್ನು ಚನ್ನಾಗಿ ಅರಿಯಬೇಕೆಂಬಭಿಲಾಷೆಯಿಂದ, ಅದಕ್ಕಾಗಿ ವಿದ್ಯಾಶುಲ್ಕವನ್ನು ಏರ್ಪಡಿಸಿ, ಬಹಳ ಕಡೆಗಳಿಂದ ಘನಪಂಡಿತರನ್ನೆಲ್ಲಾ ಕರಿಸಿದ್ದನು. ಈ ಪೆರಿಯಾಳ್ವಾರಿಗೆ ಕನಸಿನಲ್ಲಿ ನೀನು ಹೋಗಿ ವಲ್ಲಭದೇವನಿಗೆ ತತ್ವಹಿತಪುರುಷಾರ್ಥಗಳನ್ನು ತಿಳಿಸಿ ವಿದ್ಯಾಶುಲ್ಕವಾದ ಹಣದ ಗಂಟನ್ನು ಪಡೆದುಬರತಕ್ಕದ್ದೆಂಬದಾಗಿ ಶ್ರೀರಂಗಮನ್ನಾರ್‌ಸ್ವಾಮಿಯು ನೇಮಿಸಿದಂತಾಗಲು, ಆ ಆಜ್ಞೆಯನ್ನು ಶಿರಸಾವಹಿಸಿ ಹೊರಟು ಮಧುರೆಯನ್ನು ಬಂದು ಸೇರಲು, ಆ ಕಾಲದಲ್ಲೇ ವಲ್ಲಭದೇವನಿಗೂ ತತ್ವಹಿತಪುರುಷಾರ್ಥಗಳನ್ನು ಈ ಪೆರಿಯಾಳ್ವಾರ್‌ರವರಿಂದ ಸಂಗ್ರಹಿಸತಕ್ಕದ್ದೆಂಬದಾಗಿ ಕನಸು ಉಂಟಾಗಲು, ಆಗ ರಾಜನು ಬಂದು ಇವರನ್ನು ಸನ್ಮಾನಿಸಿ ಅರಮನೆಗೆ ಕರದುಕೊಂಡು ಹೋಗಿ ಉಪದೇಶವನ್ನು ಪ್ರಾರ್ಥಿಸಲಾಗಿ, ಆಗ ಆಳ್ವಾರವರು ಪುರುಷಸೂಕ್ತಾನುವಾಕಗಳಿಗೆ ಅರ್ಥತಾತ್ಪರ್ಯಗಳನ್ನು ಚನ್ನಾಗಿ ಉಪಪಾದಿಸಿ ತಿಳಿಸಿ ಶಾಸ್ತ್ರಪ್ರಮಾಣಗಳ ಮೂಲಕ ಶ್ರೀಮನ್ನಾರಾಯಣನೇ ಪರತತ್ವವೆಂಬುವದನ್ನು ಸ್ಥಾಪಿಸಿದರು. ಅದಕ್ಕೆ ಹರ್ಷಿತನಾಗಿ ರಾಜನು ಇವರಿಗೆ "ಭಟ್ಟರ್‌ಪಿರಾನ್" "ಶ್ರೀಭಟ್ಟನಾಥನ್" ಎಂಬ ಹೆಸರನ್ನು ಕೊಟ್ಟು ಇವರನ್ನು ಬಂದು ಆನೆಯಮೇಲೆ ಕೂಡಿಸಿ ಬಹು ವಿಜೃಂಭಣೆಯಿಂದ ಮೆರವಣಿಗೆಯನ್ನು ಮಾಡಿಸಿದನು. ಇತರ ಸಿದ್ಧಾಂತಗಳನ್ನು ಸಭೆಯಲ್ಲಿ ನಿರಸನಮಾಡಿ ಪರತತ್ವದ ಯಾಥಾರ್ಥ್ಯವನ್ನು ಸ್ಥಾಪಿಸಿ, ಈ ಮಹೋತ್ಸವವನ್ನು ಕೈಗೊಂಡಿರುವದನ್ನು ನೋಡಬೇಕೆಂಬ ಲೀಲಾರಸದಲ್ಲಭಿನಿವೇಶವುಳ್ಳವನಾಗಿ ಸ್ವಾಮಿನಾರಾಯಣನು

ಲಕ್ಷ್ಮೀವಿಶಿಷ್ಟನಾಗಿ ವಿಹಗಾರೂಢನಾಗಿ ಬಂದು ನಿಲ್ಲಲು, ತಮ್ಮ ಜ್ಞಾನಚಕ್ಷುಸ್ಸಿನಿಂದ ಈ ದಿವ್ಯದಂಪತಿಗಳನ್ನು ನೋಡಿದವರಾಗಿ, ಒಡನೆ ಆನೆಯಿಂದ ಕೆಳಗೆ ಧುಮುಕಿ ಆನೆಗೆ ಕಟ್ಟಿದ್ದ ಗಂಟೆಯನ್ನೇ ತಾಳವಾಗಿ ಮಾಡಿಕೊಂಡು, " ಪಲ್ಲಾಂಡು ಪಲ್ಲಾಂಡು " ನಿನಗೆ ಮಂಗಳವಾಗಲಿ ಮಂಗಳವಾಗಲಿ ಎಂಬದಾಗಿ ಗಾನರೂಪದಿಂದ ಹಾಡಿದರು. ಇವರು ರಚಿಸಿರುವ ಗ್ರಂಥಗಳು—

(1) ಪಲ್ಲಾಂಡು ೧೨ ಪಾಶುರಗಳು.

(2) ತಿರುಮೊಳಿ ೪೭೧ ಪಾಶುರಗಳು.

ಭೂಮ್ಯಂಶಳಾದ ಗೋದಾ ಅಥವಾ ಆಂಡಾಳ್, ಇವರು ಸಲಹಿದ ಮಗಳು.

**ಆಂಡಾಳ್**—ಇವರು ಕಲಿಯುಗ ೯೮ನೇದಾದ ನಳಸಂವತ್ಸರದ ಆಡಿಮಾಸ ಶುದ್ಧ ಚತುರ್ಥಿ ಮಂಗಳವಾರ ಪುಬ್ಬಾ (ಪೂರ್ವಫಲ್ಗುನಿ) ನಕ್ಷತ್ರದಲ್ಲಿ ಶ್ರೀವಿಲ್ಲಿಪುತ್ತೂರಲ್ಲಿ ಶ್ರೀಪೆರಿಯಾಳ್ವಾರವರು ವಡಪೆರುಂಕೋಯಿಲುಡೈಯಾನ್ ಕೈಂಕರ್ಯಕ್ಕಾಗಿ ರಚಿಸಿಕೊಂಡಿದ್ದ ತುಳಸೀವನದಲ್ಲಿ ಅವರು ಭೂಮಿಯನ್ನಗೆಯುತ್ತಿದ್ದಾಗ ಸಿಕ್ಕಿದರು. ಈಕೆಯು ಭೂಮ್ಯಂಶವಾದುದರಿಂದ ಸೀತೆಯಹಾಗೆ ಅಯೋನಿಜಳು. ಈ ಶಿಶುವಿಗೆ ಗೋದಾ ಎಂಬ ಹೆಸರನ್ನಿಟ್ಟು ತುಂಬಾ ಪ್ರೀತಿಯಿಂದ ಆಳ್ವಾರ್ರವರು ಸಲಹುತ್ತಿದ್ದರು. ಈಕೆಯು ಬೆಳೆದು ಪ್ರಾಪ್ತವಯಸ್ಕಳಾದಾಗ ಪ್ರತಿನಿತ್ಯವೂ ಈ ಆಳ್ವಾರವರು ಆ ಊರಿನ ವಡೆಪೆರುಂಕೋಯಿಲಾನ್ ಸ್ವಾಮಿಗಾಗಿ ಕಟ್ಟಿಯಿಟ್ಟ ಹೂವಿನ ಹಾರವನ್ನು ಈಕೆಯು ಬಿಚ್ಚಿ ಅಲಂಕಾರಮಾಡಿಕೊಂಡು, ಮುಡುಕೊಂಡು ತನ್ನಲಂಕಾರವು ಸ್ವಾಮಿಗೆ ಯೋಗ್ಯವೋ ಅಲ್ಲವೋ ಎಂದು ಬಂದು ಕನ್ನಡಿಯಲ್ಲಿ ನೋಡಿಕೊಂಡು, ಭೋಗ್ಯವಾಗಿದೆ ಎಂದು ಹೇಳುತಾ, ಹಾರವನ್ನು ಪುನಃ ಹಾಗೆಯೇ ಕಟ್ಟಿಡುತ್ತಿದ್ದಳು. ಇದನ್ನು ಬಂದು ದಿನ ಆಳ್ವಾರವರವರವಲೋಕಿಸಿದವರಾಗಿ, ಹಾರವು ಸ್ವಾಮಿಗೆ ಸಮರ್ಪಿಸಲನರ್ಹವೆಂದು ಭಾವಿಸಿ ಹಾಗೆಮಾಡಕೂಡದೆಂದು ತಮ್ಮ ಮಗಳಿಗೆ ಹೇಳಿ, ಹಾರವನ್ನು ಸ್ವಾಮಿಗೆ ಸಮರ್ಪಿಸಲಿಲ್ಲವು. ಯಾವಾಗ ಈಕೆಯು ತನ್ನ ಸ್ವಂತ

ಭೋಗಕ್ಕಾಗಿ ಉಪಯೋಗಿಸದೆ ಸ್ವಾಮಿಗೆ ತಾನು ಭೋಗ್ಯಳಹುದೋ ಅಲ್ಲವೋ ಎಂಬುವದನ್ನು ತಿಳಿಯಲು ಉಪಯೋಗಿಸಿದುದರಿಂದ, ಹಾರವು ಶಬರಿಯಿಂದರ್ಪಿತವಾದ ಫಲದೋಷಾದಿಯಲ್ಲಿ ಸ್ವಾಮಿಗೆ ಪರಮಭೋಗ್ಯವಾದುದರಿಂದ, ಆದಿನ ರಾತ್ರಿಯಲ್ಲಿ ಮಲಗಿರುವಾಗ ಈ ಆಳ್ವಾರಿಗೆ ಸ್ವಪ್ನದಲ್ಲಿ ಸ್ವಾಮಿಯು ಎದುರಿಗೆ ಬಂದುನಿಂತು, ನೀವೇತಕ್ಕೆ ಈದಿನ ಹಾರವನ್ನು ತರಲಿಲ್ಲವೆಂದು ಕೇಳಲು, ಆಗ ಆಳ್ವಾರವರು ಸ್ವಾಮಿಪಾದಕ್ಕೆರಗಿ ನಡೆದ ವೃತ್ತಾಂತವನ್ನು ಬಿನ್ನಹಮಾಡಲು, ಅದಕ್ಕೆ ಸ್ವಾಮಿಯು ನಕ್ಕು ಆದರೂ ಚಿಂತೆಯಿಲ್ಲವು, ನನಗದು ಭೋಗ್ಯವಾದುದೇ, ತಂದು ಸಮರ್ಪಿಸಬಹುದೆಂದು ಅಜ್ಞಾಪಿಸಲು, ಅವರು ಹಾಗೆಯೇ ಮಾಡುತ್ತಿದ್ದರು. ಇದರಿಂದ ಶ್ರೀಗೋದಾದೇವಿಗೆ "ಶೂಡಿಕ್ಕೊಡುತ್ತನಾಯರ್ಚ್ಚಿಯಾರ್" ಎಂಬ ನಾಮಧೇಯ ಉಂಟಾಯಿತು.

ಈಕೆಯು ಯಾವಾಗಲೂ ಸ್ವಾಮಿಯಲ್ಲೇ ಇಡಲ್ಪಟ್ಟ ಮನಸ್ಸುಳ್ಳವಳಾಗಿ ವಿವಾಹಕ್ಕೆ ಯೋಗ್ಯವಾದ ವಯಸ್ಸು ಪ್ರಾಪ್ತವಾಗಲು, ತಾನು ಯಾವ ಮನುಷ್ಯನನ್ನೂ ಮದುವೆಮಾಡಿಕೊಳ್ಳುವದಿಲ್ಲವೆಂತಲೂ, ಸ್ವಾಮಿ ಶ್ರೀಮನ್ನಾರಾಯಣನನ್ನೇ ವರಿಸುವದಾಗಿ ಹೇಳುತ್ತಿದ್ದಳು. ಈ ತನ್ನ ಮನೋರಥವು ಈಡೇರುವದಕ್ಕಾಗಿ ಭಾಗವತದಲ್ಲಿ ಉಪಪಾದಿತವಾಗಿರುವಹಾಗೆ ಗೋಪಿಯರು ಶ್ರೀಕೃಷ್ಣನನ್ನು ಹೊಂದಲು ಮಾಡಿದ ಉಪಾಯದ ರೀತಿಯಲ್ಲಿ ತಾನೂ ತನ್ನ ಸಖಿಯರನ್ನು ಕರೆದುಕೊಂಡು ಹೋಗಿ ಪ್ರಾತಃಕಾಲದಲ್ಲಿ ಅವಗಾಹನಸ್ನಾನಮಾಡಿ ಬಂದು ವಟಪತ್ರಶಾಯಿಯನ್ನು ಸೇವಿಸುತ್ತಿದ್ದಳು. ತಾನು ಅಮೋಘಜ್ಞಾನವಿಕಾಸಯುಕ್ತಳಾದುದರಿಂದ ಈ ವ್ರತವನ್ನೇ ವರ್ಣಿಸಿ, ಶ್ರುತಿಸ್ಮೃತಿತೇತಿಹಾಸಗಳಲ್ಲಿ ಪ್ರತಿಪಾದಿತವಾದರ್ಥಗಳನ್ನೆಲ್ಲಾ ಗರ್ಭೀಕರಿಸಿ "ಉಪನಿಷತ್ಸಾರ" ರೂಪವಾಗಿರುವ "ತಿರುಪ್ಪಾವೈ" ಅಂದರೆ "ಶ್ರೇಷ್ಠವಾದ ವ್ರತ" ವೆಂಬ ಹೆಸರಿನಿಂದ ರಹಸ್ಯವೇದಾಂತಾರ್ಥಗಳನ್ನೂ ಒಳಗೊಂಡ ೩೦ ಪಾಶುರಗಳುಳ್ಳ ಗ್ರಂಥವನ್ನು ರಚಿಸಿ ಹಾಡಿದರು. ಇಂತಹ ವೇದಾಂತಾರ್ಥಗಳಿಂದ ಪರಿಪೂರ್ಣವಾಗಿರುವದರಿಂದ ಇದು ಭಾಗವತೋತ್ತಮರುಗಳಿಗೆ ಪರಮಗ್ರಾಹ್ಯವಾಗಿ ಮಾರ್ಗಳಿಮಾಸದಲ್ಲಿ ಸ್ನಾನ

ಮಾಡಿ, ಸೂರ್ಯೋದಯಸಂಧ್ಯಾವಂದನಾದಿಗಳಿಗೆ ಪೂರ್ವವೇ, ಸ್ವಾಮಿಯನ್ನು ಅರ್ಚಿಸಿ, ಪೊಂಗಲ್‌ನಿವೇದನಮಾಡಿ ಪ್ರತಿದಿನದಲ್ಲೂ ಕ್ರಮವಾಗಿ ಒಂದೊಂದು ಪಾಶುರವನ್ನು ಶಾತ್ತುಮರೈ ಕಾಲದಲ್ಲಿ ಹೇಳಿ ಅದರ ವೇದಾಂತಾರ್ಥವನ್ನನುಸಂಧಾನಮಾಡುವ ಸಂಪ್ರದಾಯ ಉಂಟು. ಗೋದಾದೇವಿಯು ಸ್ವಾಮಿಶ್ರೀರಂಗನಾಥನ ಪಾದವನ್ನು ಹೇಗೆ ಹೊಂದಿದರೋ ಹಾಗೆ ಈ ವ್ರತಾನುಷ್ಠಾನಮಾಡುವವರೂ ಸಹ ಸ್ವಾಮಿಯನ್ನು ಹೊಂದಿ ನಿರತಿಶಯಸುಖಭಾಗಿಗಳಾಗುವರು. ಇಂತಹ ಪರಮಶ್ರೇಯಸ್ಕರವಾದ ಸಂಪ್ರದಾಯಗಳೆಲ್ಲಾ ಶಿಥಿಲವಾಗುತ್ತಾ ಬಂದಿರುವದು ತುಂಬಾ ಶೋಚನೀಯವಾದ ವಿಷಯವಾಗಿರುತ್ತದೆ. ಈ ತಿರುಪ್ಪಾವೆಯ ಕೊನೆಯ ಎರಡು ಶ್ಲೋಕಗಳು ಸಾಧಾರಣವಾಗಿ ಎಲ್ಲಾ ಶಾತ್ತುಮರೈ ಕಾಲಗಳಲ್ಲೂ ಪಠನೀಯಗಳಾಗಿವೆ.

ಸ್ವಾಮಿಯನ್ನೇ ಪಾಣಿಗ್ರಹಣಮಾಡಿಕೊಳ್ಳುತ್ತೇನೆಂಬದಾಗಿ ಹಟಹಿಡಿದುದರಿಂದ ಯಾವ ಸ್ವಾಮಿಯನ್ನು ವರಿಸುವಿ ಎಂಬದಾಗಿ ಕೇಳಲ್ಪಡಲು, ೧೦೮ ದಿವ್ಯದೇಶಗಳಲ್ಲಿರುವ ಸ್ವಾಮಿಯ ದಿವ್ಯ ಚರ್ಯೆಗಳನ್ನು ಕೇಳುತ್ತಾ, ಶ್ರೀರಂಗನಾಥನ ಅತ್ಯದ್ಭುತ ಮಹಾತ್ಮ್ಯೆಗೆ ಬೆರಗಾಗಿ, ಆತನನ್ನೇ ತಾನು ವರಿಸತಕ್ಕವಳೆಂದು ಹೇಳಿ ಆತನಿಂದ ತನ್ನ ಮನೋರಥಗಳನ್ನು ಪಡೆದಹಾಗೆ "ನಾಚ್ಚಿಯಾರ್ ತಿರುಮೊಳಿ" ಎಂಬ ೧೪೩ ಪಾಶುರುಗಳುಳ್ಳ ದಿವ್ಯ ಗ್ರಂಥವನ್ನು ರಚಿಸಿ ಹಾಡುತ್ತಿದ್ದರು.

ಹೀಗಿರುವಲ್ಲಿ ಒಂದು ದಿನ ಶ್ರೀರಂಗನಾಥನ ಸನ್ನಿಧಿಯಲ್ಲಿರುವವರಿಗೂ ಪೆರಿಯಾಳ್ವಾರವರಿಗೂ ಸಹ ಶ್ರೀಗೋದಾವನ್ನು ಸರ್ವವಿಜೃಂಭಣೆಯಿಂದಲೂ ಕರೆಕೊಂಡು ಬರತಕ್ಕದ್ದು, ಅವರನ್ನು ಶ್ರೀರಂಗನಾಥನಾದ ತಾನು ಪಾಣಿಗ್ರಹಣ ಮಾಡಿಕೊಳ್ಳುವೆನು ಎಂಬದಾಗಿ ಸ್ವಪ್ನ ಉಂಟಾಗಲು, ಈ ಆಳ್ವಾರವರು ಸ್ವಾಮಿನೇಮನವನ್ನು ಶಿರಸಾವಹಿಸಿ ತಮ್ಮ ಮಗಳನ್ನು ಅಲಂಕರಿಸಿಕೊಳ್ಳುವ ಹಾಗೆ ಹೇಳಿ, ಪಲ್ಲಕ್ಕಿಯಲ್ಲಿ ಕೂಡಿಸಿ, ಶ್ರೀರಂಗದಿಂದ ಬಂದ ಪರಿಜನದೊಂದಿಗೆ ತಾವೂ ಹೋಗಿ ಶ್ರೀರಂಗನಾಥನ ಮುಂದೆ ನಿಲ್ಲಿಸಲು ಆಕೆಯು ಸ್ವಾಮಿಯ ದಿವ್ಯ ಮಂಗಳವಿಗ್ರಹವನ್ನು ಕಂಡು ದೇಹಪರವಶ

ಳಾಗಿ ತದೇಕಧ್ಯಾನಳಾಗಿ ಇರುತ್ತಿದ್ದ ಹಾಗೆಯೇ ಸ್ವಾಮಿಯಲ್ಲೇ ಅಂತರ್ಧಾನವನ್ನು ಹೊಂದಿದಳು. ಪೆರಿಯಾಳ್ವಾರ್ರವರಿಗೆ ಹಿಂತಿರಿಗಿ ಶ್ರೀವಿಲ್ಲಿಪುತ್ತೂರಿಗೆ ಹೋಗಿ ವಟಪತ್ರಶಾಯಿಯ ಕೈಂಕರ್ಯದಲ್ಲೇ ನಿರತರಾಗಿರುವ ಹಾಗೆ ಸ್ವಾಮಿ ಶ್ರೀರಂಗನಾಥನ ಆಜ್ಞೆಯಾದುದರಿಂದ ಹಿಂತಿರುಗಿ ಬಂದು ದಿವ್ಯ ತುಳಸೀಮಾಲಾಕೈಂಕರ್ಯವನ್ನು ಕೈಕೊಂಡಿರುತ್ತಿದ್ದರೆಂಬ ವೃತ್ತಾಂತವುಂಟು.

7. ಶ್ರೀಕುಲಶೇಖರಾಳ್ವಾರ್—ಇವರು ಕೌಸ್ತುಭಾಂಶರು. ಕಲಿಯುಗದ ೨೮ನೇ ಪರಾಭವ ಸಂವತ್ಸರದ ಮಾಶಿಮಾಸ ಶುಕ್ಲಪಕ್ಷ ದ್ವಾದಶಿ ಶುಕ್ರವಾರ ಪುನರ್ವಸು ನಕ್ಷತ್ರದಲ್ಲಿ ಕೇರಳದೇಶದ ಕೋಳವೆಂಬ ಪಟ್ಟಣದಲ್ಲಿ ದೃಢವ್ರತನೆಂಬ ರಾಜನಿಗೆ ಕುಮಾರರಾಗಿ ಹುಟ್ಟಿದರು. ಈ ಸಂಸ್ಥಾನಕ್ಕೆ ಈಗ ತಿರುವಾಂಕೂರ್ ಸಂಸ್ಥಾನವೆಂದು ಹೆಸರು. ಇವರು ಶೀಘ್ರದಲ್ಲೇ ಶಾಸ್ತ್ರಜ್ಞಾನವನ್ನು ಹೊಂದಿದವರಾಗಿ ರಾಜಭೋಗದಲ್ಲಿದ್ದರೂ ಅವುಗಳನ್ನೆಲ್ಲಾ ತುಚ್ಛವಾಗಿ ಎಣಿಸಿ ತುಂಬಾ ವೈರಾಗ್ಯವುಳ್ಳವರಾಗಿ ಭಗವದ್ಭಾಗವತಕೈಂಕರ್ಯದಲ್ಲಿ ತುಂಬಾ ಆದರವುಳ್ಳವರಾಗಿದ್ದರು. ಇವರಿಗೆ ಶ್ರೀಮದ್ಭಾಗವತ, ಶ್ರೀಮದ್ರಾಮಾಯಣ ಮುಂತಾದ ಕಾಲಕ್ಷೇಪಗಳಲ್ಲಿ ತುಂಬಾ ಆಸಕ್ತಿ ಇತ್ತು. ಒಂದು ದಿನ ರಾಮಾಯಣಕಾಲಕ್ಷೇಪದಲ್ಲಿ ಅರಣ್ಯಕಾಂಡದ ೧೦ನೇ ಸರ್ಗ ೧೯ನೇ ಶ್ಲೋಕವಾದ

ಅಪ್ಯಹಂಜೀವಿತಂ ಜಹ್ಯಾಂ ತ್ವಾಂ ವಾ ಸೀತೇ ಸ ಲಕ್ಷ್ಮಣಾಂ।
ನಹಿ ಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ ॥

ಎಂಬುವದರ ಉಪನ್ಯಾಸವು ಜರುಗುತ್ತಿತ್ತು. ಇದು ಯಾವ ಸಂದರ್ಭವೆಂದರೆ, ದಂಡಕಾರಣ್ಯದಲ್ಲಿರುವಾಗ ಸೀತೆಯು ರಾಮನನ್ನು ಕುರಿತು, ಪರಪ್ರಾಣಾಭಿಹಿಂಸನರೂಪವಾದ, ನಿನ್ನ ವಿಷಯದಲ್ಲಿ ನಿರಪರಾಧಿಗಳಾದ ರಾಕ್ಷಸರನ್ನು ಕೊಲ್ಲುವದು ಯಾವನ್ಯಾಯವು ಎಂಬದಾಗಿ ತುಂಬಾ ಭಕ್ತಿಯಿಂದ ಅರಿಕೆಮಾಡಲು, ಅದಕ್ಕೆ ಶ್ರೀರಾಮನು ಕ್ಷತ್ರಿಯ ಧನಸ್ಸು, ಎಲ್ಲಿಯೂ ಕೂಡ ಆರ್ತಧ್ವನಿ ಇಲ್ಲದೇ ಇರುವ ಹಾಗೆ ಮಾಡುವದಕ್ಕಾಗಿಯೇ ಹುಟ್ಟಿದುದು, ನಿರಪರಾಧಿಗಳಾದ ದಂಡಕಾರಣ್ಯ ಋಷಿಗಳನ್ನು ರಾಕ್ಷ

ಸರು ಹಿಂಸಿಸುವದು ನ್ಯಾಯವಲ್ಲವಷ್ಟೆ, ಇದೂ ಅಲ್ಲದೆ ಮಹರ್ಷಿಗಳೆಲ್ಲರೂ ನನ್ನಲ್ಲಿ ಶರಣಾಗತಿಯನ್ನು ಮಾಡಿದ್ದಾರೆ. ಅಂತಹ ಶರಣಾಗತರ ಕೋರಿಕೆಯಾದ ಈ ದುಷ್ಟರಾಕ್ಷಸರನ್ನು ನಿಗ್ರಹಿಸುವದು ನನ್ನ ಮುಖ್ಯಕರ್ತವ್ಯವು. ಋಷಿಗಳಿಗೆ ಅಭಯವನ್ನು ಕೊಟ್ಟಿರುತ್ತೇನೆ. ಅಂತಹ ಶರಣಾಗತಿ ಧರ್ಮಪರಿಪಾಲನಕ್ಕಾಗಿ ಜೀವವನ್ನಾದರೂ ತೊರೆಯುವೆನು, ಲಕ್ಷ್ಮಣನೊಂದಿಗೆ ನಿನ್ನನ್ನಾದರೂ ಬಿಡುವೆನು. ಸತ್ಯಪ್ರತಿಜ್ಞೆಯನ್ನು ಎಂದಿಗೂ ಬಿಡೆನು. ಅದರಲ್ಲೂ ಭಾಗವತೋತ್ತಮರಾದ ಬ್ರಾಹ್ಮಣರ ವಿಷಯದಲ್ಲಿ ಮಾಡಿದ ವಾಗ್ದಾನದ ವಿಷಯದಲ್ಲಿ ಹೇಳತಕ್ಕದ್ದೇನಿದೆ ಎಂಬದಾಗಿ ಶ್ರೀರಾಮನು ತನ್ನ ಪ್ರಿಯಪತ್ನಿಯನ್ನು ಕುರಿತು ಹೇಳುವ ಸಂದರ್ಭವು. ಈ ಶ್ಲೋಕಸ್ವಾರಸ್ಯವನ್ನು ಗ್ರಹಿಸಿದ ಒಡನೆಯೇ ಇವರಿಗೆ ಪ್ರಪತ್ತಿಮಾರ್ಗದಲ್ಲೂ ಬ್ರಾಹ್ಮಣಭಾಗವತರಲ್ಲೂ ಆದರವು ನಿರತಿಶಯವಾದುದಾಯಿತು.

ಇನ್ನೊಂದು ದಿನ,

ಚತುರ್ದಶಸಹಸ್ರಾಣಾಂ ರಕ್ಷಸಾಂ ಭೀಮಕರ್ಮಣಾಂ ।
ಏಕಶ್ಚ ರಾಮೋ ಧರ್ಮಾತ್ಮಾ ಕಥಂ ಯುದ್ಧಂ ಭವಿಷ್ಯತಿ ॥
(ರಾ. ಅರ. ೨೩-೨೪.)

ಎಂಬ ಶ್ಲೋಕಾರ್ಥವು ನಡೆಯುತ್ತಿತ್ತು. ಕ್ರೂರಕರ್ಮಿಗಳಾದ ರಾಕ್ಷಸರಾದರೋ ಹದಿನಾಲ್ಕುಸಾವಿರಮಂದಿ, ಧರ್ಮಿಷ್ಠನಾದ ಶ್ರೀರಾಮನಾದರೋ ಓರ್ವನು. ಇವರುಗಳಿಗೆ ಕಾಳಗವು ಹೇಗೆ ಕೂಡೀತು ಎಂದು ರಾಜರ್ಷಿಗಳು ಹೇಳುತ್ತಿದ್ದರೆಂಬದಾಗಿ ಹೇಳಿದ ಒಡನೆಯೇ, ರಾಜನು ಮಂತ್ರಿಗಳನ್ನು ಕರದು ತನ್ನ ಸೇನೆಯೆಲ್ಲಾ ಶ್ರೀರಾಮಸಹಾಯಕ್ಕಾಗಿ ಸಿದ್ಧವಾಗಲೆಂದಾಜ್ಞಾಪಿಸಲು, ಆಗ ಉಪನ್ಯಾಸಕರು ಈ ಆಳ್ವಾರಿಗೆ ಸ್ವಾಮಿಭಕ್ತಿಯಲ್ಲೇ ಇವರು ಮಗ್ನರಾಗಿ ದೇಹಪರವಶರಾಗಿರುವದನ್ನರಿತು,

ತಂ ದೃಷ್ಟ್ವಾ ಶತ್ರುಹಂತಾರಂ ಮಹರ್ಷೀಣಾಂ ಸುಖಾವಹಂ ।
ಬಭೂವ ಹೃಷ್ಟಾ ವೈದೇಹೀ ಭರ್ತಾರಂ ಪರಿಷಸ್ವಜೇ ॥
(ರಾ. ಅರ. ೩೦-೩೯.)

ಆ ಹದಿನಾಲ್ಕು ಸಹಸ್ರ ರಾಕ್ಷಸರನ್ನೂ ಮೂರೂ ಮುಕ್ಕಾಲು ಘಳಿಗೆಗಳಲ್ಲಿ ತನ್ನ ಪತಿಯು ಕೊಂದಿದ್ದನ್ನು ಅವಲೋಕಿಸಿದವಳಾಗಿ ಪರಮಸಂತೋಷಯುಕ್ತಳಾಗಿ, ತಾನು ಮೊದಲು ಅರಣ್ಯಪ್ರವೇಶಕಾಲದಲ್ಲಿ ಪರುಷೋಕ್ತಿಯಿಂದ "ಸ್ತ್ರಿಯಂ ಪುರುಷವಿಗ್ರಹಂ" ಅಂದರೆ ಸ್ತ್ರೀವೇಷಧಾರೀ ಪುರುಷನು ಎಂದು ಮೂದಲಿಸಿದ ಹಾಗಲ್ಲದೆ, ತನ್ನ ಪತಿಯು ಮಹಾಧೀರನು, ವೀರಾಗ್ರೇಸರನು ಎಂದು ಭಾವಿಸಿ, ಅಂತಹ ಶತ್ರುನಾಶಕನಾಗಿ ಮಹರ್ಷಿಗಳಿಗೆಲ್ಲಾ ಪರಮಾನಂದವನ್ನಿತ್ತ ತನ್ನ ಪತಿಯನ್ನು ಸೀತೆಯು ಆಲಿಂಗನವನ್ನು ಮಾಡಿದಳು ಎಂಬ ಶ್ಲೋಕಾರ್ಥವನ್ನು ಹೇಳದ ಒಡನೆಯೇ, ಆಳ್ವಾರವರು ಉಪಶಾಂತತೆಯನ್ನು ಹೊಂದಿ ಸೇನೆಯನ್ನು ಹಿಂದಕ್ಕೆ ಕಳುಹಿಸಿಬಿಡುವಹಾಗೆ ಆಜ್ಞಾಪಿಸಿದರೆಂಬ ವೃತ್ತಾಂತವುಂಟು. ಈ ಇತಿಹಾಸಗಳು ಇವರಿಗೆ ಸ್ವಾಮಿಯಲ್ಲಿರುವ ನಿರತಿಶಯಭಕ್ತಿ ಸೂಚಿಸುವವಲ್ಲದೆ ಇವರಿಗೆ ಶ್ರೀವೈಷ್ಣವರಾದ ಭಾಗವತೋತ್ತಮರಲ್ಲೂ ತುಂಬಾ ಭಕ್ತಿ ಎಂಬುವದನ್ನು ವ್ಯಕ್ತಪಡಿಸುತ್ತವೆ.

ಇದನ್ನು ನೋಡಿ, ಈ ಕುಲಶೇಖರರ ಮಂತ್ರಿಗಳು ಅಸೂಯೆಯಿಂದ ಅರಮನೆಯಲ್ಲಿ ದೇವರ ಆಭರಣಗಳನ್ನೆಲ್ಲಾ ಬಚ್ಚಿಟ್ಟು ಶ್ರೀವೈಷ್ಣವರು ಕದ್ದರು ಎಂಬದಾಗಿ ಅವರುಗಳಮೇಲೆ ಕಳವನ್ನು ಹೊರಸಲು, ಅದಕ್ಕೇ ಆಳ್ವಾರವರು ಒಂದು ಸಭೆಮಾಡಿ ಒಂದು ಘಟದಲ್ಲೊಂದು ಘಟಸರ್ಪವನ್ನಿಡಿಸಿ ಶ್ರೀವೈಷ್ಣವರು ಈ ಕೆಲಸವನ್ನು ಮಾಡಲಿಲ್ಲವೆಂಬದಾಗಿ ಪ್ರಮಾಣಮಾಡಿ ಕೊಡದಲ್ಲಿ ಕೈಬೆರಳನ್ನಿಡಲು ಸರ್ಪವು ಕಚ್ಚದಿರಲು, ರಾಜನು ಅನಂತರ ಮಂತ್ರಿಗಳನ್ನು ಕರೆದು ಶ್ರೀವೈಷ್ಣವರು ಕಳ್ಳರು ಎಂಬದಾಗಿ ಪ್ರಮಾಣಮಾಡಿ, ಘಟದಲ್ಲಿ ಕೈಯನ್ನಿಡಿ ಎಂದಾಜ್ಞಾಪಿಸಲು, ಆಗ ಅವರು ಭಯವಿಹ್ವಲರಾಗಿ, ತಮ್ಮ ಅಪರಾಧವನ್ನು ತಿಳಿಸಿ ಶ್ರೀವೈಷ್ಣವರ ಕಾಲನ್ನು ತೊಳೆದು ಕ್ಷಮಾಪಣೆಯನ್ನು ಪ್ರಾರ್ಥಿಸಿಕೊಂಡರು. ಇವರು ಸಂಸ್ಕೃತದಲ್ಲಿ "ಮುಕುಂದಮಾಲಾಸ್ತೋತ್ರ" ಮುಕ್ತಿಯನ್ನು ಕೊಡುವ ಶ್ರೀರಂಗನಾಥನಿಗೆ

ಮಾಲಾರೂಪವಾದುದು ಎಂಬ ರತ್ನಸದೃಶವಾದ ಅಮೋಘಸ್ತೋತ್ರವನ್ನೂ, ತಮಿಳ್‌ಭಾಷೆಯಲ್ಲಿ "ಪೆರುಮಾಳ್‌ತಿರುಮೊಳಿ" (ಪಾಶುರಗಳು ೧೦೫) ಎಂಬುವದನ್ನೂ ರಚಿಸಿರುತ್ತಾರೆ. ಇವರು ಮುಖ್ಯವಾಗಿ ಭಗವತ್ಪ್ರಪತ್ತಿಕೈಂಕರ್ಯಗಳಿಗೆ ಭಾಗವತಪ್ರಪತ್ತಿ ಕೈಂಕರ್ಯಗಳ ವರಿವಿಗೂ ಸಂಬಂಧ ಉಂಟೆಂಬ ವಿಷಯವನ್ನು ವಿಶದವಾಗಿ ತೋರ್ಪಡಿಸಿರುತ್ತಾರೆ.

೪. ತಿರುಪ್ಪಾಣಾಳ್ವಾರ್—ಇವರು ಶ್ರೀವತ್ಸಾಂಶರು. ಶ್ರೀರಂಗದಹತ್ತಿರವಿರುವ ಉರಯೂರಿನ ಸಮೀಪದಲ್ಲಿರುವ ಸತ್ಯಂಬಸ್ಥಳದ ಒಂದು ಭತ್ತದ ಗದ್ದೆಯ ಮಧ್ಯವು ಇವರಿಗೆ ಅವತಾರ ಸ್ಥಳ. ಇವರು ಕಲಿಯುಗ ೩೪೩ನೇ ದುರ್ಮತಿ ಸಂವತ್ಸರದ ವೃಶ್ಚಿಕಮಾಸ ಕೃಷ್ಣದ್ವಿತೀಯ ಬುಧವಾರ ರೋಹಿಣೀ ನಕ್ಷತ್ರದಲ್ಲಿ ಅವತರಿಸಿದರು. ಮಕ್ಕಳಿಲ್ಲದ ಪಂಚಮದಂಪತಿಗಳಿಂದ ಸ್ತನ್ಯವಿಲ್ಲದೆ ಗೋವಿನಹಾಲಿನ ಮೂಲಕವಾಗಿಯೇ ಬೆಳದು, ವಿದುರಾದಿಗಳ ಹಾಗೆ ಅಸಂಕುಚಿತ ಜ್ಞಾನವುಳ್ಳವರಾದ ಪ್ರಯುಕ್ತ ದಿವ್ಯ ತೇಜಸ್ವಿಯಾಗಿ, ಗಾನವಿದ್ಯಾವಿಶಾರದರಾಗಿ ಶ್ರೀರಂಗನಾಥನನ್ನು ಪರಮಭಕ್ತಿಯಿಂದ ಧ್ಯಾನಮಾಡುತ್ತಲಿದ್ದುದರಿಂದ ಶ್ರೀರಂಗನಾಥನು ಕರುಣಿಸಿ, ಇವರಿಗೆ ತನ್ನ ಸಂದರ್ಶನವನ್ನು ಕೊಡಬೇಕೆಂಬ ಪರಮೋದಾರಭಾವದಿಂದ ಲೋಕಸಾರಂಗಮುನಿಯೆಂಬ ತನ್ನ ಭಕ್ತನಿಗೆ ಸ್ವಪ್ನದಲ್ಲಿ ತಮ್ಮ ಪರಮಭಕ್ತನಾದ ತಿರುಪ್ಪಾಣನನ್ನು ನೀನು ಬೆನ್ನಿನಮೇಲೆ ಕೂರಿಸಿಕೊಂಡು ಬರಬೇಕೆಂದಾಜ್ಞಾಪಿಸಲು, ತಿರುಪ್ಪಾಣಾಳ್ವಾರವರು ತಮಗೆ ಪಂಚಮಸಂಸರ್ಗವಿದ್ದುದರಿಂದ ಕೂಡದೆಂಬದಾಗಿ ಎಷ್ಟು ನಿರೋಧಿಸಿದರೂ ಕೇಳದೆ ಲೋಕಸಾರಂಗಮುನಿಯು ಅವರನ್ನು ಬೆನ್ನಿನಮೇಲೆ ಕೂರಿಸಿಕೊಂಡು ಹೋಗಿ ಶ್ರೀರಂಗನಾಥನ ಮುಂದೆ ನಿಲ್ಲಿಸಲು, ಅವರು ಆ ದಿವ್ಯಮಂಗಳ ವಿಗ್ರಹವನ್ನು ಕಂಡು ಧನ್ಯರಾಗಿ ಸ್ವಾಮಿಯ ಪಾದಕಮಲವನ್ನು ಹಿಡಿದು ಶಿರಸ್ಸಿನವರಿವಿಗೂ ಸರ್ವಾವಯವವನ್ನೂ ವರ್ಣಿಸಿ, "ಅಮಲನಾದಿಪಿರಾನ್" ಎಂಬ ದಿವ್ಯ ಪ್ರಬಂಧದಿಂದ ಸ್ತೋತ್ರಮಾಡಿರುತ್ತಾರೆ. ಪಾಶುರಗಳು ೧೦. ಇದೂ ನಿತ್ಯಾನುಸಂಧಾನಗ್ರಂಥಕ್ಕೆ ಸೇರಿದುದಾ

ಗಿದೆ. ಈ ಪ್ರಬಂಧದ ಕೊನೆಯ ಎರಡು ಶ್ಲೋಕಗಳಿಂದ "ಆಲಮಾ ಮರತ್ತಿಲ್" "ಕೊಂಡಲ ವ್ವಣ್ಣನ್ನೈ" ಎಂಬುವಗಳನ್ನು ಶಾತ್ತುಮುರೈಕಾಲಗಳಲ್ಲಿ ದೇವಸ್ಥಾನದಲ್ಲಿ ಹೇಳುವ ಪದ್ಧತಿಯುಂಟು.

೪. ತೊಂಡರಡಿಪ್ಪೊಡಿಯಾಳ್ವಾರ್—ತೊಂಡರ್ ಅಂದರೆ ಭಕ್ತರ, ಅಡಿ - ಕಾಲಿನ, ಪ್ಪೊಡಿ - ಧೂಳು ಎಂಬರ್ಥವು. ಇವರಿಗೆ ಭಾಗವತರ ವಿಷಯದಲ್ಲಿದ್ದ ಪರಾಕಾಷ್ಠೆಯಿಂದ ಭಕ್ತಾಂಘ್ರಿರೇಣು, ತೊಂಡರಡಿಪ್ಪೊಡಿ ಎಂಬ ನಾಮಧೇಯಗಳನ್ನು ಇವರು ವಹಿಸಿದರು. ಇವರು ವನಮಾಲಾಂಶರಾಗಿ ಕಲಿ ೨೮೯ನೇ ಪ್ರಭವ ಸಂವತ್ಸರದ ವೃಶ್ಚಿಕ ಮಾಸ ಕೃಷ್ಣ ಚತುರ್ದಶಿ, ಮಂಗಳವಾರ ಜ್ಯೇಷ್ಠಾನಕ್ಷತ್ರದಲ್ಲಿ ತಿರುಮಂಡಂಗುಡಿಯಲ್ಲಿ ಶ್ರೀವೈಷ್ಣವ ಕುಲದಲ್ಲಿ ಜನಿಸಿದರು. ಇವರ ತಂದೆಗಳು ಇವರಿಗೆ ವಿಪ್ರನಾರಾಯಣರೆಂಬ ಹೆಸರನ್ನಿಟ್ಟು ಉಪನಯನವನ್ನು ನಡಿಸಿ ವೇದವೇದಾಂಗ ಮೊದಲಾದ ಸರ್ವಶಾಸ್ತ್ರಗಳಲ್ಲೂ ಪಾರಂಗತೆಯನ್ನುಂಟುಮಾಡಿಸಿದರು. ಅನಂತರ ಇವರು ಗೃಹಸ್ಥಾಶ್ರಮವನ್ನು ಕೈಕೊಂಡು ನಿತ್ಯಕರ್ಮಾನುಷ್ಠಾನದಲ್ಲಿ ನಿರತರಾಗಿ ಭಾಗವತಾಗ್ರೇಸರರೆಂಬ ಯಶಸ್ಸನ್ನು ಹೊಂದಿದರು. ಶ್ರೀರಂಗಕ್ಕೆ ಬಂದು ನಿತ್ಯವೂ ಶ್ರೀರಂಗನಾಥನನ್ನು ಸೇವಿಸುತ್ತಿದ್ದುದರಿಂದ ಇವರಿಗೆ ತುಂಬಾ ವೈರಾಗ್ಯವುಂಟಾಗಿ "ಪರಮಾತ್ಮನಿಯೋರಕ್ತಃ ವಿರಕ್ತೋಽಪರಮಾತ್ಮನಿ" ಎಂಬ ಉಕ್ತಿಗನುಸಾರವಾಗಿ, ಐಹಿಕದಲ್ಲಿ ಸ್ವಲ್ಪವೂ ಆಸಕ್ತಿಯಿಲ್ಲದೆ, ಅಲ್ಲೇ ಒಂದು ತೋಟವನ್ನು ಮಾಡಿಕೊಂಡು ಶ್ರೀರಂಗನಾಥನ ಆಜ್ಞೆಮೇರಿಗೆ ತುಲಸೀಪುಷ್ಪಮಾಲಾಕೈಂಕರ್ಯಗಳಮೂಲಕ ಕಾಲಯಾಪನೆಯನ್ನು ಮಾಡುತ್ತಿದ್ದರು. ಇವರನ್ನು ನೋಡಿ ಲಕ್ಷ್ಮಿಯು ತನ್ನ ಪತಿಯನ್ನು ಕುರಿತು ಇಂತಹ ಪರಮವಿರಕ್ತರ ವಿಷಯದಲ್ಲಿ ಐಹಿಕವು ಏನು ಮಾಡೀತೆಂಬದಾಗಿ ಹೇಳಲು, ಅದಕ್ಕೆ ಜಗಲ್ಲೀಲಾಸಕ್ತನಾದ ಸ್ವಾಮಿಯು ಅವರಿಗೆ ವಿಷಯಾಸಕ್ತಿಯುಂಟಾದರೆ ಏನು ಹೇಳುತ್ತೀಯೆ ಎಂದು ಪ್ರಣಯೋಕ್ತಿಗಳು ನಡೆಯಲು, ಕೆಲವು ದಿನಗಳಾದನಂತರ ಒಬ್ಬ ದೇವಕನ್ನಿಕೆಯು ಹತ್ತಿರದಲ್ಲಿರುವ ಗ್ರಾಮವಾದ ತಿರುಕ್ಕರಂಬನೂರಲ್ಲಿ ವಾಸಮಾಡುತ್ತಾ ಶ್ರೀರಂಗಕ್ಕೆ ಬಂದು

ಬಹುಸುಂದರವಾದ ವೇಶ್ಯಾರೂಪದಲ್ಲಿ ಇವರೆದುರಿಗೆ ನಲಿದಾಡಿದರೂ ಇವರು ಕಣ್ಣೆತ್ತಿ ನೋಡದಿರಲು, ಬಳಿಕ ಅವಳು ತೋಟದಲ್ಲಿ ಕೆಲಸಮಾಡುವ ದಾಸಿಯವೇಷವನ್ನು ತಾಳಿ, ತನಗೂ ಶ್ರೀರಂಗನಾಥನ ಕೈಂಕರ್ಯವನ್ನು ಮಾಡಬೇಕೆಂಬ ಕುತೂಹಲವುಂಟು, ಅಪ್ಪಣೆಯನ್ನಿತ್ತರೆ ತೋಟದ ಕೆಲಸದಲ್ಲಿ ತಾನೂ ಸಹಾಯಮಾಡುವೆನೆಂಬದಾಗಿ ಬಹುವಾಗಿ ಪ್ರಾರ್ಥಿಸಲಾಗಿ, ಅದಕ್ಕೇ ಆಳ್ವಾರವರು ಸಮ್ಮತಿಸಿ ಆಕೆಯಿಂದ ತೋಟದ ಕೆಲಸವನ್ನು ಮಾಡಿಸುತ್ತಿದ್ದರು. ಹೀಗಿರಲಾಗಿ ಒಂದು ದಿನ ಸಂತತಧಾರೆಯಾಗಿ ಮಳೆಸುರಿಯಲು ಈ ವಿಪ್ರನಾರಾಯಣರು ತಾವು ತೋಟದಲ್ಲೇ ರಚಿಸಿದ್ದ ಒಂದು ಪರ್ಣಶಾಲೆಯಲ್ಲಿ ಮಳೆಗೆ ಮರೆಯಾಗಿ ನಿಂತರು. ಈ ದಾಸಿಯು ಮಳೆಯಲ್ಲಿ ತೊಯ್ಯುತ್ತಿದ್ದುದರಿಂದ ಕನಿಕರದಿಂದ ಈ ವಿಪ್ರನಾರಾಯಣರು ಆಕೆಯನ್ನು ಪರ್ಣಶಾಲೆಯೊಳಗೆ ಬರಹೇಳಿ ಆಜ್ಞಾಪಿಸಿದರು. ಆಗ ಅವರು ಆಕೆಯ ವಿಭ್ರಮವಿಲಾಸಗಳಿಂದ ವಂಚಿತರಾಗಿ ಆಕೆಯನ್ನು ಪರಿಗ್ರಹಿಸಿದರು. ಅವಳು ಅನಂತರ ತೋಟವನ್ನು ಬಿಟ್ಟು ಅಲ್ಲಿಗೆ ಹತ್ತಿರದಲ್ಲೇ ಇರುವ ತಿರುಕ್ಕರುಂಬನೂರಲ್ಲಿ ತನ್ನ ಗೃಹಕ್ಕೆ ಹೋಗಿ ಸೇರಿದಳು. ಇವರೂ ಅನಂತರ ಆಕೆಯಿರುವಲ್ಲಿಗೆ ಹೋಗಿ ಬಾಗಿಲನಲ್ಲಿ ನಿಂತು ಅವಳಿಗೆ ಕೊಡಲು ದ್ರವ್ಯ ಮೊದಲಾದವು ಏನೂ ಇಲ್ಲದೆ ಪರಿತಾಪದಿಂದ ತೋಟಕ್ಕೆ ಹಿಂತಿರುಗಿ ಬರಲಾಗಿ ಶ್ರೀರಂಗನಾಥನು ಒಬ್ಬ ದೂತನ ವೇಷವನ್ನು ತಾಳಿ ಆ ದಾಸಿಯಮನೆಗೆ ಹೋಗಿ ವಿಪ್ರನಾರಾಯಣರು ಈ ಚಿನ್ನದ ಬಟ್ಟಲನ್ನು ನಿನಗೆ ಕೊಟ್ಟುಬಿಟ್ಟು ಬಾ ಎಂಬದಾಗಿ ಹೇಳಿ ಆಕೆಯ ಕೈಗೆ ಕೊಟ್ಟು ಹಿಂತಿರುಗಿ ಬಂದು ಅಂತರ್ಧಾನವಾದನು. ಅನಂತರ ಒಂದು ಚಿನ್ನದ ಬಟ್ಟಲು ದೇವಸ್ಥಾನದಲ್ಲಿಲ್ಲದೇ ಇರಲು ವಿಚಾರಣೆಯಲ್ಲಿ ಕೊನೆಗೆ ವೇಶ್ಯಾಸ್ತ್ರೀಯ ಮನೆಯಲ್ಲಿ ಸಿಕ್ಕಿ, ಆಕೆಯು ವಿಪ್ರನಾರಾಯಣರು ಕಳುಹಿಸಿಕೊಟ್ಟರೆಂದು ಹೇಳಿದುದರಿಂದ ವಿಪ್ರನಾರಾಯಣರನ್ನು ಹಿಡಿದು ದಂಡಿಸುವ ಸಮಯದಲ್ಲಿ ಶ್ರೀರಂಗನಾಥನು ತನ್ನ ಲೀಲಾರ್ಥವಾಗಿ ಈ ಕೌತುಕವನ್ನೆಲ್ಲಾ ನಡಿಸಿದನೆಂದು ಸ್ವಪ್ನದಲ್ಲಿ ತಿಳಿಸಿದುದರಿಂದ ಆಳ್ವಾರನ್ನು ಮನ್ನಿಸಿಬಿಟ್ಟರು.

ಈ ಇತಿಹಾಸವು " ಚಂಚಲಂ ಹಿ ಮನಃ ಕೃಷ್ಣ[1] " ಎಂಬುವ ಸೂಕ್ತಿಗೂ " ಇಂದ್ರಿಯಾಣಿ ಪ್ರಮಾಥೀನಿ ಹರನ್ತಿ ಪ್ರಸಭಂ ಮನಃ[2] " ಎಂಬ ಸೂಕ್ತಿಗೂ ಅನುಸಾರವಾಗಿ, ಮನಸ್ಸು ಚಂಚಲವೆಂಬದಾಗಿಯೂ ಆ ಮನಸ್ಸನ್ನು ಬಲಿಷ್ಠವಾದ ಇಂದ್ರಿಯಗಳು ಅಪಹರಿಸುತ್ತವೆಂಬುದಾಗಿಯೂ ಪ್ರಕಟಿಸುತ್ತದೆ. ಇಂತಹ ವಿರಕ್ತರಾದ ಭಾಗವತೋತ್ತಮರು ತಮಗುಂಟಾದ ಈ ದುರ್ದೆಶೆಗಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂಬ ಆಶೆಯಿಂದ ಭಾಗವತೋತ್ತಮರ ಶ್ರೀ ಪಾದತೀರ್ಥವನ್ನು ಸ್ವೀಕರಿಸಿ ಪಾವನತೆಯನ್ನು ಹೊಂದಿದವರಾಗಿ ಶ್ರೀರಂಗನಾಥನನ್ನು ಸೇವಿಸಿ ಆತನ ಕರುಣೆಯಿಂದ " ತಿರುಪ್ಪಳ್ಳಿಯೆಳುಚ್ಚಿ " (ಪಾಶುರಗಳು ೧೦) ಎಂಬುವ ಸ್ವಾಮಿಗೆ ಸುಪ್ರಭಾತಕೈಂಕರ್ಯರೂಪವಾದ ಗ್ರಂಥವನ್ನೂ ಮತ್ತು " ತಿರುಮಾಲೈ " (ಪಾಶುರಗಳು ೪೫) ಎಂಬ ಗ್ರಂಥವನ್ನೂ ರಚಿಸಿರುತ್ತಾರೆ. ಇವರು ಭಾಗವತಪಾದತೀರ್ಥದ ಮಾಹಾತ್ಮ್ಯೆಯನ್ನು ಚೆನ್ನಾಗಿ ತೋರ್ಪಡಿಸಿರುತ್ತಾರೆ. " ತಿರುಪ್ಪಳ್ಳಿ ಎಳುಚ್ಚಿ "ಯು ನಿತ್ಯಾನುಸಂಧಾನಸೇವೆಯಲ್ಲಿ ಪಠನಮಾಡಲ್ಪಡುವದಾಗಿರುತ್ತದೆ.

9. ತಿರುಮಳಿಶೈಯಾಳ್ವಾರ್—ಇವರು ಚಕ್ರಾಂಶರು. ದ್ವಾಪರಯುಗಾಂತ್ಯದಲ್ಲಿ ಮೊದಲು ಮೂರು ಆಳ್ವಾರುಗಳಾದ ಪೊಯಿಗೈಮುನಿ, ಭೂತಮುನಿ, ಮಹದಾಹ್ವಯಮುನಿಗಳು ಹುಟ್ಟಿದ ಸಿದ್ಧಾರ್ಥಿಸಂವತ್ಸರದ ಮಕರಮಾಸ, ಕೃಷ್ಣಪಕ್ಷ ಪ್ರಥಮೆ ಭಾನುವಾರ ಮಖಾನಕ್ಷತ್ರದಲ್ಲಿ ಅವತರಿಸಿದರು. ಇವರ ತಂದೆಯು ಭೃಗುಮಹರ್ಷಿಯು. ಇವರ ತಪಸ್ಸನ್ನು ಕೆಡಿಸುವದಕ್ಕಾಗಿ ಇಂದ್ರನಿಂದ ಕಳುಹಲ್ಪಟ್ಟ ಒಬ್ಬ ಅಪ್ಸರಸ್ತ್ರೀಯು ಇವರ ತಾಯಿಯು. ತಾಯಿಯು ದೇವಲೋಕವನ್ನು ಸಾರಿದುದರಿಂದಲೂ, ತಂದೆಯು ಪುನಃ ತಪಸ್ಸಿನಲ್ಲೀ ಮಗ್ನರಾದುದರಿಂದಲೂ, ಮಗುವನ್ನು ನೋಡಿಕೊಳ್ಳುವರು ಯಾರೂ ಇಲ್ಲದೆ ಅಳುತ್ತಿರಲು, ತಿರುವಾಳನ್ ಎಂಬ ಒಬ್ಬ ಬೇಡನು ಆ ಮಗು

1 ಭ. ಗೀ. ೬, ೩೪. 2 ಭ. ಗೀ. ೨, ೬೦.

ವನ್ನು ಕಂಡ ತನಗೆ ಮಕ್ಕಳಿಲ್ಲವಾದುದರಿಂದ ಬಹು ಆದರದಿಂದ ತಂದು ತನ್ನ ಹೆಂಡತಿಯಾದ ಮಂಗೆಯುಚ್ಚೆಲಿ ಯಾರ್ ಎಂಬುವಳ ವಶಕ್ಕೆ ಕೊಟ್ಟು ಸಲಹುತ್ತಿದ್ದನು. ಈ ಮಗುವು ಸ್ತನ್ಯವನ್ನು ಒಲ್ಲದ್ದರಿಂದಮಕ್ಕಳಿಲ್ಲದ ಒಬ್ಬ ಶೂದ್ರನೂ ಆತನ ಭಾರ್ಯೆಯೂ ಆ ಮಗುವಿಗೆ ಶುದ್ಧವಾದ ಗೋವಿನ ಹಾಲನ್ನು ತೆಗೆದುಕೊಂಡುಹೋಗಿ ಕೊಟ್ಟು ಆ ಮಗುವು ಕುಡಿದ ಶೇಷವನ್ನು ದಂಪತಿಗಳಿಬ್ಬರೂ ಪರಿಗ್ರಹಿಸುತ್ತಾ ಬಂದುದರಿಂದ ಆ ಶೂದ್ರದಂಪತಿಗಳಿಗೆ ಕಣಿಕ್ಕೃಷ್ಣರೆಂಬ ಕುಮಾರರು ಜನಿಸಿದರು. ಕೆಲವುಕಾಲ ಕಳೆದನಂತರ ಈ ಆಳ್ವಾರು ಬೇಡರ ಗುಂಪನ್ನು ತ್ಯಜಿಸಿ ಬಂದು ವಿದ್ಯಾಪಾರಂಗತೆಯನ್ನು ಹೊಂದಿ ವಿಪುಲಶಾಸ್ತ್ರಜ್ಞಾನವನ್ನು ಪಡೆದು, ಶ್ರೀಮನ್ನಾರಾಯಣನೇ ಪರತತ್ವವೆಂಬುದನ್ನು ಸ್ಥಾಪಿಸಿ, ಯೋಗಾಭ್ಯಾಸನಿರತರಾಗಿದ್ದರು. ಈ ಯೋಗಾಭ್ಯಾಸ ಮಹಿಮೆಯಿಂದ ಬಹುಕಾಲ ಜೀವಿಸಿದ್ದರೆಂಬದಾಗಿ ಚರಿತ್ರೆಯುಂಟು. ಇವರ ಮಹಿಮೆಯ ವಿಷಯದಲ್ಲಿ ಅನೇಕ ಇತಿಹಾಸಗಳುಂಟು.

1. ಒಂದು ದಿನ ಪಾರ್ವತೀಪರಮೇಶ್ವರರು ಆಕಾಶದಲ್ಲಿ ಹೋಗುತ್ತಿರುವಾಗ, ಪರಮೇಶ್ವರನು ತಮೋಗುಣಭೂಯಿಷ್ಠನಾದುದರಿಂದ ಅವರುಗಳ ನೆರಳು ತಮ್ಮ ಮೇಲೆ ಬೀಳದ ಹಾಗೆ ಸ್ವಲ್ಪ ಓರೆಯಾಗಿ ನಿಂತರು. ಇದನ್ನು ಅವರು ಕಂಡು ಈ ಆಳ್ವಾರನ್ನು ಕುರಿತು ನಿನಗೆ ಬೇಕಾದ ವರವನ್ನು ಕೇಳು ಕೊಡುವೆನು ಎಂಬದಾಗಿ ಹೇಳಲು, ಪರಮಪುರುಷಾರ್ಥವಾದ ಮೋಕ್ಷವನ್ನು ಕೊಡುವ ಶಕ್ತಿಯು ಸ್ವಾಮಿ ಶ್ರೀಮನ್ನಾರಾಯಣನಿಗೊಬ್ಬನಿಗೇ ವಿನಾ ಇತರರಿಗಿಲ್ಲವೆಂಬುದಂ ಚೆನ್ನಾಗಿ ಅರಿತವರಾದುದರಿಂದಲೂ ಮೋಕ್ಷೇತರಗಳೆಲ್ಲಾ ತುಚ್ಛವಾಗಿ ಆಳ್ವಾರವರಿಗೆ ಬೇಡವಾದುದರಿಂದಲೂ ಆಳ್ವಾರವರು ಆ ದಂಪತಿಗಳ ಮಾತಿಗೆ ನಕ್ಕು, ಸೂಜಿಯ ಹಿಂದೆ ದಾರವು ಬರುವಹಾಗೆ ಮಾಡತಕ್ಕದ್ದೇ ವರವೆಂಬದಾಗಿ ಅಪಹಾಸ್ಯಮಾಡಲು, ಅದಕ್ಕಾಗಿ ರುದ್ರನು ಕುಪಿತನಾಗಿ ತನ್ನ ಫಾಲನೇತ್ರದಿಂದ ಸುಟ್ಟುಬಿಡಬೇಕೆಂಬದಾಗಿ ಕ್ರೂರವಾಗಿ ನೋಡಿದರೂ, ಆಳ್ವಾರವರಿಗೆ ಏನೂ ತೊಂದರೆಯಾಗದೆ, ಆಳ್ವಾರವರು ವಿಷ್ಣುವಿನ ಚಕ್ರಾಂಶರಾದುದರಿಂದ ಅವರ ಕೋಪದೃಷ್ಟಿಯು ಉಪಶಾಂತಿ

ಗೆ ತೊಂದರೆಯುಂಟುಮಾಡಿದುದರಿಂದ ಆಳ್ವಾರವರ ಅನುಗ್ರಹವನ್ನು ಪ್ರಾರ್ಥಿಸಿ, ಅವರಿಗೆ ಭಕ್ತಿಸಾರರೆಂಬ ಹೆಸರನ್ನು ಕೊಟ್ಟು ಪರಮೇಶ್ವರನು ಪಾರ್ವತೀ ಸಮೇತನಾಗಿ ಹೊರಟುಹೋದನು.

೩. ಅನಂತರ ಈ ಆಳ್ವಾರವರು ಪೊಯ್ಗೈಮುನಿಯವತಾರ ಸ್ಥಳವಾದ ಕಾಂಚೀಪುರದಲ್ಲಿ ಯೋಗಾಭ್ಯಾಸನಿರತರಾಗಿರುವಾಗ, ಅಲ್ಲಿಗೆ ಈ ಕಣಿಕೃಷ್ಣರು ಬಂದು ಆಳ್ವಾರ್ರವರ ಶುಶ್ರೂಷೆಯಲ್ಲಿ ನಿರತರಾಗಿರಲು, ಆಗ ಒಬ್ಬ ವೃದ್ಧ ಹೆಂಗಸು ಅಲ್ಲಿ ದೇವಸ್ಥಾನದಲ್ಲಿ ರಂಗೋಲಿ ಹಾಕುವದು ಮುಂತಾದ ಸ್ವಾಮಿ ಕೈಂಕರ್ಯಗಳಲ್ಲಿ ನಿರತಳಾಗಿರುವದನ್ನು ಕಂಡು, ಆಕೆಯು ಬಹುಕಾಲ ಹೀಗೆಯೇ ಕೈಂಕರ್ಯವನ್ನು ಮಾಡುತ್ತಿರಬೇಕೆಂದೆಣಿಸಿ, ಆಕೆಗೆ ದೇಹದಾರ್ಢ್ಯವುಂಟಾಗಿ ಯವ್ವನಾವಸ್ಥೆಯು ಪ್ರಾಪ್ತವಾಗುವ ಹಾಗೆ ಕಣಿಕೃಷ್ಣರ ಮೂಲಕ ಅನುಗ್ರಹಿಸಿ ತಿಳಿಸಿದರು. ಆಕೆಗೆ ಯವ್ವನಪ್ರಾಪ್ತಿಯಾದುದನ್ನು ಆ ದೇಶದ ದೊರೆಯಾದ ಪಲ್ಲವರಾಯನೆಂಬುವನು ತಿಳಿದು, ತನಗೂ ಯವ್ವನವು ಪ್ರಾಪ್ತವಾಗುವಹಾಗೆ ಆಕೆಯ ಮೂಲಕ ಕಣಿಕೃಷ್ಣರಿಗೆ ಹೇಳಿಕಳುಹಿಸಿದನು. ಅದಕ್ಕೆ ಕಣಿಕೃಷ್ಣನು ತನ್ನ ನಾಲಿಗೆಯು ಐಹಿಕದಲ್ಲಿ ಮಗ್ನನಾದ ಮನುಷ್ಯನ ವಿಷಯದಲ್ಲಿ ಪ್ರವರ್ತಿಸಲಾರದೆಂದು ಹೇಳಿ ಆ ರಾಜನ ಕೋರಿಕೆಯನ್ನು ಸಲ್ಲಿಸದಿರಲು, ಅದಕ್ಕೆ ರಾಜನು ಕುಪಿತನಾಗಿ ಕಣಿಕೃಷ್ಣನನ್ನು ತನ್ನ ರಾಜ್ಯವನ್ನು ಬಿಟ್ಟು ಹೊರಗೆ ಹೋಗುವಹಾಗೆ ಆಜ್ಞಾಪಿಸಲಾಗಿ, ಕಣಿಕೃಷ್ಣರು ಮಳಿಶೈಯಾಳ್ವಾರವರ ಅಪ್ಪಣೆಯನ್ನು ಪ್ರಾರ್ಥಿಸಲಾಗಿ, ಆಳ್ವಾರವರು ತಮ್ಮ ಪ್ರಿಯಶಿಷ್ಯನನ್ನಗಲಿರಲು ಸಮ್ಮತಿಸದೆ, ತಾನೂ ಜೊತೆಯಲ್ಲಿ ಹೋಗಲು ಅಲ್ಲಿ ದೇವಸ್ಥಾನದಲ್ಲಿದ್ದ ಸ್ವಾಮಿಯನುಜ್ಞೆಯನ್ನು ಬೇಡಲಾಗಿ, ಸ್ವಾಮಿಯೂ ತನ್ನ ಪರಮ ಭಕ್ತರಾದ ಆಳ್ವಾರು ಕಣಿಕೃಷ್ಣರೊಂದಿಗೆ ಹೋಗಬೇಕೆಂಬ ಸಂಕಲ್ಪವನ್ನು ಅರ್ಚಕಮುಖೇನ ತಿಳಿಸಿ, ಎಲ್ಲರೂ ಆ ರಾಜನ ದೇಶವನ್ನು ಬಿಟ್ಟು ಹೋಗಲು ಹೊರಡಲು, ಆಗ ವೃಕ್ಷ ಮೊದಲಾದವುಗಳೂ ಕೂಡ ಇವರುಗಳಿಗೆ ಓರೆಯಾಗಿ ಸ್ಥಳವನ್ನು ಕೊಟ್ಟವೆಂಬ ಪರಮಾಶ್ಚರ್ಯಕರವಾದ ವಾರ್ತೆಯನ್ನು ಕೇಳಿ, ರಾಜನು ಎದುರುಗೊಂಡು

ಬಂದು, ಕಣಿಕೃಷ್ಣ ಆಳ್ವಾರುಗಳ ಕ್ಷಮಾಪಣೆಯನ್ನು ಪ್ರಾರ್ಥಿಸಿ, ಪೂಜಿಸಿ, ಅವರುಗಳನ್ನೆಲ್ಲಾ ಹಿಂತಿರುಗಿಸಿ, ಅವರುಗಳ ಸೇವೆಯು ನಡೆಯುವ ಹಾಗೆ ಮಾಡಿದನು.

3. ಇನ್ನೊಂದು ಸಂದರ್ಭದಲ್ಲಿ ಆಳ್ವಾರವರು ಕುಂಭಘೋಣೆಗೆ ಯಾತ್ರಾರ್ಥವಾಗಿ ಹೊರಟು ಮಾರ್ಗದಲ್ಲಿ ಪೆರೆಂಬುಲಿಯಾರ್ ಎಂಬ ಸ್ಥಳಕ್ಕೆ ಬಂದಾಗ, ಅಲ್ಲಿ ಒಂದು ಬೀದಿಯಲ್ಲಿ ಬ್ರಾಹ್ಮಣರು ವೇದಾಧ್ಯಯನ ಮಾಡುತ್ತಿದ್ದರು. ಶೂದ್ರರ ಮಧ್ಯದಲ್ಲಿ ಬೆಳೆದವರಾದುದರಿಂದ ಇವರನ್ನು ತಮ್ಮ ಬೀದಿಗೆ ಬಾರದ ಹಾಗೆ ಬ್ರಾಹ್ಮಣರು ಗದರಿಸಿದರು. ಆಗ ಆಳ್ವಾರವರು ಆ ಬೀದಿಯನ್ನು ಬಿಟ್ಟು ಬೇರೆ ಕಡೆಗೆ ಹೋಗಲು, ಇವರು ಸ್ವಾಮಿಗೆ ತುಂಬಾ ಭಕ್ತರಾಗಿ ಭಾಗವತೋತ್ತಮರಾದುದರಿಂದ ಇವರಿಗೆ ಮಾಡಿದ ಅಪಚಾರದಿಂದ ವೇದಾಧ್ಯಯನವು ಮಾಡುತ್ತಿದ್ದ ಭಾಗವು ಮರೆತುಹೋಯಿತು. ಅಲ್ಲಿ ದೇವಸ್ಥಾನದಲ್ಲಿ ಬಿಜಮಾಡಿಸಿದ್ದ ಸ್ವಾಮಿಯು ಇವರ ಕಡೆಗೆ ತಿರುಗಿ ನಿಂತಿದ್ದರಿಂದ, ಪರಮಾಶ್ಚರ್ಯಪಟ್ಟವರಾಗಿ ಆ ಅಪಚಾರಮಾಡಿದ ಬ್ರಾಹ್ಮಣರು ಇವರಲ್ಲಿಗೆ ಬಂದು ಭಾಗವತಾಪಚಾರಕ್ಕೆ ಭಾಗವತಕ್ಷಮಾಪಣೆಯೇ ಪ್ರಾಯಶ್ಚಿತ್ತವಾದುದರಿಂದ, ಆಳ್ವಾರಲ್ಲಿ ಕ್ಷಮಾಪಣೆಯನ್ನು ಪ್ರಾರ್ಥಿಸಿದರು. ಆಗ ಆಳ್ವಾರವರು ತಾವು ವೇದೋಚ್ಚಾರಣೆ ಮಾಡುವದು ಸರಿಯಲ್ಲವೆಂದು ಭಾವಿಸಿ ಒಂದು ಕಪ್ಪಾದ ಭತ್ತವನ್ನು ತೆಗೆದು ಉಗುರಿನಿಂದ ಸುಲಿದು ಅವರಿಗೆ ತೋರಿಸಲಾಗಿ, ಅವರಿಗೆ ಅಧ್ಯಯನದಲ್ಲಿ ಬಿಟ್ಟು ಮರೆತುಹೋದ ಭಾಗವು " ಕೃಷ್ಣಾನಾಂ ವ್ರೀಹೀನಾಂ ನಖ ನಿರ್ಭಿನ್ನಂ " ಎಂಬುವದು ಜ್ಞಾಪಕಕ್ಕೆ ಬಂತೆಂದು ಪ್ರತೀತಿಯುಂಟು.

4. ಇನ್ನೊಂದು ಸಂದರ್ಭದಲ್ಲಿ ಇವರಲ್ಲಿ ಇಂತಹ ಮಾಹಾತ್ಮ್ಯಗಳನ್ನರಿತ ಒಬ್ಬ ಬ್ರಾಹ್ಮಣನು ಯಾಗಮಾಡುತ್ತಿದ್ದುದರಿಂದ, ಇಂತಹ ಭಾಗವತೋತ್ತಮರನ್ನು ತಾನು ಬರಮಾಡಿಕೊಂಡರೆ ಯಾಗ ನಿರ್ವಿಘ್ನವಾಗಿ ಪೂರ್ತಿಯಾದೀತೆಂಬ ಭಾವನೆಯಿಂದ ಇವರನ್ನು ಯಾಗಸಭೆಗೆ ಕರೆದುಕೊಂಡು ಮರ್ಯಾದೆಮಾಡಿ ಕುಳ್ಳಿರಿಸಲು, ಅದಕ್ಕೆ ಕೆಲವು ಬ್ರಾಹ್ಮಣರು ಶೂದ್ರನನ್ನು ಕರಿಸಿರುತ್ತಾರೆಂದು, ಶಿಶುಪಾಲನು ಶ್ರೀ

ಕೃಷ್ಣನನ್ನು ಧರ್ಮರಾಯನ ರಾಜಸೂಯ ಯಜ್ಞಸಭೆಯಲ್ಲಿ ನಿಂದಿಸಿದ ಹಾಗೆ ಇವರನ್ನು ದೂಷಿಸಲಾಗಿ, ಆಗ ಇವರು ಚಕ್ರಾಂಶರಾದುದರಿಂದ ಅವರುಗಳಿಗೆ ಒಂದು ಜ್ವಾಲಾರೂಪದಲ್ಲಿ ಚಕ್ರವು ಕಾಣಬಂದುದರಿಂದ, ಅವರುಗಳು ಈ ಆಳ್ವಾರ್ರವರ ಕ್ಷಮಾಪಣೆಯನ್ನು ಪ್ರಾರ್ಥಿಸಿದರು. ಆಗ ಅವರು ಬ್ರಾಹ್ಮಣರಿಗೆ ಚಕ್ರದಿಂದುಂಟಾದ ಭಯವನ್ನು ತಪ್ಪಿಸಿ, ಶ್ರೀಮನ್ನಾರಾಯಣನೇ ಪರತತ್ವವೆಂಬದಾಗಿಯೂ ಆತನ ಭಕ್ತರೆಲ್ಲಾ ಭಾಗವತೋತ್ತಮರಾದುದರಿಂದ ಪೂಜ್ಯರೆಂಬದಾಗಿಯೂ ಅವರಿಗೆ ಉಪದೇಶಿಸಿದರು.

ಇವರು ಬರೆದಿರುವ ಗ್ರಂಥಗಳು—

ನಾಲ್ಮುಹಲ್ ತಿರುವಂದಾದಿ—ಪಾಶುರಗಳು ೯೬.

ತಿರುಚ್ಚಂದವಿರುತ್ತಂ—ಪಾಶುರಗಳು ೧೨೦.

10. ತಿರುಮಂಗೈ ಆಳ್ವಾರ್—ಇವರು ಶಾರ್ಙ್ಗಾಂಶರು. ಕಲಿಯುಗ ೩೯೯ನೇ ನಳಸಂವತ್ಸರದ ವೃಶ್ಚಿಕಮಾಸ ಪೌರ್ಣಮಿ ಗುರುವಾರ ಕೃತ್ತಿಕಾನಕ್ಷತ್ರದಲ್ಲಿ ತಿರುವಾಲಿಯೆಂಬ ಊರಿನಲ್ಲಿ ನೀಲನೆಂಬ ಒಬ್ಬ ಶೂದ್ರನಿಗೆ ಕುಮಾರರಾಗಿ ಹುಟ್ಟದರು. ಚೋಳರಾಜನ ಹತ್ತಿರ ಸೇನಾಪತಿಯಾಗಿದ್ದು ಅಸ್ತ್ರವಿದ್ಯೆಯಲ್ಲಿ ತುಂಬಾ ಪಾರಂಗತೆಯನ್ನು ಹೊಂದಿದುದರಿಂದ ಪರಕಾಲರೆಂಬ (ಶತ್ರುಗಳಿಗೆ ಯಮನು) ಹೆಸರನ್ನು ಪಡೆದರು. ಕುಮುದವನದಲ್ಲಿ ಸಿಕ್ಕಿದುದರಿಂದ ಕುಮುದವಲ್ಲಿ ಎಂಬ ಹೆಸರುಳ್ಳ ಒಬ್ಬ ಸುಂದರಳಾದ ಕನ್ಯೆಯನ್ನು ಒಬ್ಬ ವೈಶ್ಯನು ಸಾಕಿಕೊಂಡಿರುವದನ್ನರಿತವರಾಗಿ, ಆ ಕನ್ಯೆಯನ್ನು ಮದುವೆಮಾಡಿಕೊಳ್ಳಬೇಕೆಂಬ ಕುತೂಹಲಯುಕ್ತರಾಗಿ ಆ ವೈಶ್ಯನನ್ನು ಪ್ರಾರ್ಥಿಸಲಾಗಿ, ಚಕ್ರಾಂಕಿತನಾಗಿ ದೇವಭಾಗವತ ಕೈಂಕರ್ಯವನ್ನು ಸದಾಮಾಡುತ್ತಿರುವೆನೆಂದು ಒಪ್ಪಿಕೊಂಡರೆ ತನ್ನ ಮಗಳಾದ ಕುಮುದವಲ್ಲಿಯು ನಿನ್ನನ್ನು ವರಿಸುವಳೆಂದು ಹೇಳಲು, ಈ ಪರಕಾಲರು ಅದಕ್ಕೆ ಸಮ್ಮತಿಸಿ ತಿರುನರೈಯೂರಿನ ಅರ್ಚಾವತಾರಸ್ವಾಮಿಯನುಗ್ರಹದಿಂದ ಊರ್ಧ್ವಪುಂಡ್ರಚಕ್ರಾಂಕಿತ ಮೊದಲಾದವುಗಳನ್ನು ಪರಿಗ್ರಹಿಸಿ, ಕುಮು

ದವಲ್ಲಿಯನ್ನು ವಿವಾಹಮಾಡಿಕೊಂಡು, ಆಕೆಯೊಂದಿಗೆ ಸುಖವಾಗಿದ್ದು ಕೊಂಡು, ಹೆಚ್ಚು ದ್ರವ್ಯ ವೆಚ್ಚ ಮಾಡಿ ಭಗವದ್ಭಾಗವತಾರಾಧನೆಗಳನ್ನು ನಡಿಸುತ್ತಿದ್ದರು. ಈ ತದೀಯಾರಾಧನೆಗಳಿಗೆ ಹೆಚ್ಚು ದ್ರವ್ಯ ವ್ಯಯ ಮಾಡುತ್ತಿದ್ದಾರೆಂಬ ವರ್ತಮಾನವನ್ನು ಚೋಳರಾಜನು ಕೇಳಿದವ ನಾಗಿ, ಅವರನ್ನು ಹಿಡಿತರಲು ಸೇನೆಯನ್ನು ಕಳುಹಿದನು. ಆಳ್ವಾರ ವರು ಆ ಸೇನೆಯಮೇಲೆ ಬಿದ್ದು ಅದನ್ನೆಲ್ಲಾ ಧ್ವಂಸಮಾಡಿದ್ದರಿಂದ ರಾಜನು ತಾನೇ ಸೇನೆಯೊಂದಿಗೆ ಬರಲು, ಅದನ್ನೂ ಕೂಡ ಮುರಿದುದ ರಿಂದ, ರಾಜನು ಭೇದೋಪಾಯವನ್ನವಲಂಬಿಸಿ, ಅವರ ಪರಾಕ್ರಮ ಕ್ಕೆ ಮೆಚ್ಚಿದವನ ಹಾಗೆ ನಟಿಸಿ ಅವರನ್ನು ಹಿಡಿದು ದೇವಾಲಯದಲ್ಲಿ ಸೆರೆ ಇಟ್ಟನು. ಇದರಿಂದ ತದೀಯಾರಾಧನೆಗೆ ಬಂದ ಭಂಗಕ್ಕಾಗಿ ಆಹಾರವನ್ನು ತೊರೆದು ತುಂಬಾ ದೈನ್ಯದಿಂದಲೂ ಭಕ್ತಿಯಿಂದಲೂ ಪ್ರಾರ್ಥಿಸಲಾಗಿ ಸ್ವಾಮಿಯು ಕರುಣಿಸಿ ಒಂದುಪಾಯಮೂಲಕ ಬಹು ದ್ರವ್ಯವನ್ನು ದಯಪಾಲಿಸಲಾಗಿ, ಆಗ ಆಳ್ವಾರವರು ರಾಜನಿಗೆ ಕೊಡತಕ್ಕ ಹಣವನ್ನು ಕೊಟ್ಟು ಕಳುಹಿಸಿ, ಮಿಕ್ಕ ಹಣವನ್ನು ತದೀಯಾ ರಾಧನೆ ಖರ್ಚಿಗಾಗಿ ಇಟ್ಟುಕೊಳ್ಳಲು, ರಾಜನು ಈ ವೃತ್ತಾಂತವನ್ನ ರಿತು ಇವರ ಮಾಹಾತ್ಮ್ಯೆಯನ್ನು ಕೊಂಡಾಡಿ ಆ ಹಣವನ್ನೆಲ್ಲಾ ಅವ ರಿಗೇನೆ ಸಮರ್ಪಿಸಿ ನಮಸ್ಕಾರಮಾಡಿ ತಾನು ಮಾಡಿದ ಅಪರಾ ಧವನ್ನು ಕ್ಷಮಿಸಬೇಕಾಗಿ ಪ್ರಾರ್ಥಿಸಿದನು. ಆಮೇಲೆ ಪುನಃ ತದೀಯಾರಾಧನೆಗೆ ಹಣ ಸಾಲದೇ ಇರಲು ಅವೈಷ್ಣವರಾದ ಅಸಾ ಧುಗಳಿಂದ ಧನವನ್ನು ಕಿತ್ತು, ತದೀಯಾರಾಧನಾರೂಪದಲ್ಲಿ ಸಾಧು ಸಂತರ್ಪಣೆಮಾಡುವದು ಸಾಧುವಾದುದೆಂದು ಭಾವಿಸಿದವರಾಗಿ, ಹಾಗೆ ಯೇ ಹೆಚ್ಚಾದ ದ್ರವ್ಯದಿಂದ ಅವೈಷ್ಣವರಿಂದ ಕದ್ದು ತದೀಯಾ ರಾಧಾನೆಯನ್ನು ಜರುಗಿಸುತ್ತಿದ್ದರು. ಹೀಗೆಯೇ ಒಂದು ದಿನ ಈ ಆಳ್ವಾರವರು ಒಬ್ಬ ಹೆಂಗಸಿನ ಮೈಮೇಲಿದ್ದ ಒಡವೆಗಳನ್ನು ಅಪಹರಿಸಿದರು. ಆಗ ಆಕೆಯು ಹೋಗಿ ತನ್ನ ಪತಿಯೊಂದಿಗೆ ಸ್ವಾಮಿ ಶ್ರೀಮನ್ನಾರಾಯಣನು ತನ್ನ ಒಡವೆಯನ್ನೆಲ್ಲಾ ತೆಗೆದುಕೊಂಡನೆಂದು ಹೇಳಲು ಇದನ್ನು ಆಳ್ವಾರವರು ತಿಳಿದು ಆಕೆಯು ವೈಷ್ಣವಳೆಂದು

ತೋರಿಬಂದುದರಿಂದ, ಆ ಆಭರಣಗಳನ್ನೆಲ್ಲಾ ಆಕೆಗೆ ಹಿಂದಕ್ಕೆ ಕೊಟ್ಟು ಬಿಟ್ಟರು.

ಇನ್ನೊಂದು ಸಂದರ್ಭದಲ್ಲಿ ಲೋಕದಂಪತಿಗಳಾದ ಲಕ್ಷ್ಮೀನಾರಾಯಣರು ಅವೈಷ್ಣವರಾಗಿ ವೇಷವನ್ನು ಧರಿಸಿ, ಇಬ್ಬರೂ ಸರ್ವಾಭರಣಭೂಷಿತರಾಗಿ ವಿವಾಹವಾದನಂತರ ಬರುವ ದಿಬ್ಬಣದ ಜನಗಳ ಮಧ್ಯೆ ಇರುವ ಹಾಗೆ ಕಾಣಿಸಿಕೊಳ್ಳಲು, ಆಳ್ವಾರವರೂ ಅವರ ಕಳ್ಳಕಾಕರರ ಸೈನ್ಯವೂ ನುಗ್ಗಿ ಅವರುಗಳ ಆಭರಣಗಳನ್ನೆಲ್ಲಾ ತೆಗೆದುಕೊಂಡು ಒಂದು ಪೆಟ್ಟಿಗೆಯಲ್ಲಿಟ್ಟು ಮದುವೆಗಂಡಿನ ವೇಷದಲ್ಲಿದ್ದ ಲೋಕನಾಯಕನನ್ನು ಗದರಿಸಿ ಪೆಟ್ಟಿಗೆಯನ್ನು ಹಿಡಿದು ತಲೆಯಮೇಲೆ ಹೊರಿಸು ಎಂದು ಕೇಳಲು; ಪೆಟ್ಟಿಗೆಯು ಅತ್ಯಂತ ಭಾರವಾಗಿ ಪರಿಣಮಿಸಿದುದರಿಂದ. ಸ್ವಾಮಿಯನ್ನು ಕುರಿತು ಯಾವ ಮಂತ್ರದಿಂದ ಈ ಪೆಟ್ಟಿಗೆಯನ್ನು ಇಷ್ಟು ಭಾರವಾಗಿ ಮಾಡಿರುತ್ತೀಯೋ ಆ ಮಂತ್ರವನ್ನುಪದೇಶಿಸುವೆಯೋ ಇಲ್ಲವೋ ಎಂಬದಾಗಿ ಕತ್ತಿಯನ್ನು ಝಳಪಿಸಲು, ಅದಕ್ಕೆ ಶ್ರೀಮನ್ನಾರಾಯಣನು ತನಗೆ ತಿಳಿಯದು ಎಂದು ಹೇಳಿ, ಇತರರು ಕಾಣದಹಾಗೆ, ತನ್ನ ಸೇವೆಯನ್ನಿತ್ತು ಅಷ್ಟಾಕ್ಷರ ಮಂತ್ರವನ್ನು ಆಳ್ವಾರವರ ಕರ್ಣದಲ್ಲುಪದೇಶಿಸಿ, ಅಂತರ್ಧಾನವನ್ನೈದಿದನು. ಸ್ವಾಮಿಯ ದಿವ್ಯ ಕಟಾಕ್ಷಬಲದಿಂದ ತಮಗೆ ಪ್ರಾಪ್ತವಾದ ಭಗವದನುಭವ ಮಾಹಾತ್ಮ್ಯೆಯನ್ನೆಲ್ಲಾ.

ಪೆರಿಯತಿರುಮೊಳಿ—ಪಾಶುರಗಳು ೧೦೮೪.
ತಿರುಕ್ಕುರುಂದಾಂಡಹಂ—ಪಾಶುರಗಳು ೨೦.
ತಿರುವೆಳು ಕೂತ್ತಿರುಕ್ಕೈ—ಪಾಶುರಗಳು ೨.
ಪೆರಿಯತಿರುಮಡಲ್—ಪಾಶುರಗಳು ೧೪೮.
ಶಿರಿಯತಿರುಮಡಲ್—ಪಾಶುರಗಳು ೭೭.
ತಿರುನೆಡಂದಾಂಡಕಂ—ಪಾಶುರಗಳು ೩೦,

ಎಂಬೀ ಗ್ರಂಥಗಳಿಂದ ವಿಸ್ತರಿಸಿ "ನಾಲುಕವಿಪೆರುಮಾಳ್" ಎಂಬ ಬಿರುದನ್ನು ಹೊಂದಿದರು. ಈ ಬಿರುದನ್ನು ಪಡೆದ ಸಂಬಂಧ

**ಇನ್ಬತ್ತಿಲಿ ರಂಜುತಲಿ ಲಿಶ್ಯೆಯುಮ್ಪೋತ್ತಿಲಿ**
**ಕಳಂದಪಲ್ಲುರವಿಲಿ ರಾಗವಾತ್ತಿಲ್ ।**

ಮೂರ್ತಿ ಎಂಬ ತಮಿಳ್ ಕವಿಯು ಇವರೊಂದಿಗೆ ವಾದಕ್ಕೆ ಬರಲು ಆತನನ್ನು ಜಯಿಸಿ ತಮ್ಮ ಬಿರುದನ್ನು ಕಾಪಾಡಿಕೊಂಡರು. ಅನಂತರ ಇವರು ಶ್ರೀರಂಗದಲ್ಲಿ ನಿಂತು ಆತನ ಸೇವೆಯನ್ನೂ ಕೈಂಕರ್ಯವನ್ನೂ ಮಾಡುತ್ತಾ ಆ ದಿವ್ಯ ದೇಶದಲ್ಲಿ ಶ್ರೀರಂಗನಾಥನಿಗೆ ಮಂಟಪ ಗೋಪುರಗಳನ್ನೂ ಪ್ರಾಕಾರಗಳನ್ನೂ ಕಟ್ಟಬೇಕೆಂದು ಸಂಕಲ್ಪಿಸಿ ನಾಗಪಟ್ಟಣಕ್ಕೆ ಹೋಗಿ ಅಲ್ಲಿದ್ದ ಸುವರ್ಣಮಯವಾದ ಒಂದು ಬೌದ್ಧ ವಿಗ್ರಹವನ್ನು ತಂದು ಕರಗಿಸಿ ತನ್ಮೂಲಕ ಮಂಟಪಗೋಪುರ ಪ್ರಾಕಾರ ಮೊದಲಾದವುಗಳನ್ನು ರಚಿಸಿ, ಪರಮಪದನಾಥನ ಸನ್ನಿಧಿಯನ್ನು ಕಟ್ಟಿಸಿ ಪ್ರತಿಷ್ಠೆಮಾಡಿ, ಆಳ್ವಾರತಿರುನಗರಿಯಿಂದ ನಮ್ಮಾಳ್ವಾರ್ ಮೂರ್ತಿಯನ್ನು ಬಿಜಮಾಡಿಕೊಂಡು ಬಂದು ತಿರುವಧ್ಯಯನ ಮಹೋತ್ಸವವನ್ನು ಮಾರ್ಗಳಿ ಶುದ್ಧ ಏಕಾದಶಿಯಹಾಗೆ ನಡಿಯುವಂತೆ ಮಾಡಿ, ಪ್ರಪನ್ನನಾದವನು ಶರಣಾಗತಿಯನ್ನನುಷ್ಠಿಸಿ ಕೃತಕೃತ್ಯನಾಗಿ ದೇಹಾವಸಾನಾನಂತರ ಹೇಗೆ ಯಾವ ಮಾರ್ಗವಾಗಿ ಪರಮಪದವನ್ನು ಹೋಗಿ ಸೇರಿ ಮೋಕ್ಷವನ್ನನುಭವಿಸುವನೆಂಬುವದನ್ನು ಉತ್ಸವಗಳ ಮೂಲಕವಾಗಿಯೂ ದ್ರಾಮಿಡಪ್ರಬಂಧೋಪನ್ಯಾಸಮೂಲಕವಾಗಿಯೂ ನಿದರ್ಶನವಾಗುವಂತೆ ತೋರ್ಪಡಿಸಿ ಜೀವರುಗಳ ಉಜ್ಜೀವನಾರ್ಥವಾಗಿ ಈ ಆಳ್ವಾರವರು ಮಹೋಪಕಾರವನ್ನು ಮಾಡಿರುತ್ತಾರೆ.

1. ಇನ್ಬತ್ತಿಲ್ ಎಂದರೆ ಆನಂದವನ್ನುಂಟುಮಾಡುವದರಲ್ಲೂ; ಮೊದಲಿನ ಪಾಶುರದಲ್ಲಿ "ಅಣ್ಣಿಕ್ಕುಮಮುತೂರು ಎನ್ನಾವುಕ್ಕೆ" ಯಾವಾಗಲೂ ನನ್ನ ನಾಲಿಗೆಗೆ ಅಮೃತವು ಊರುವಹಾಗೆ ನಮ್ಮಾಳ್ವಾರವರು ಅನುಗ್ರಹಮಾಡಿದರು ಎಂಬದಾಗಿ ಹೇಳುವದರಿಂದ, ನಮ್ಮಾಳ್ವಾರವರು ಮಾಡಿರುವ ಉಪದೇಶದಿಂದ ಅಮೃತಪ್ರಾಶನದಷ್ಟು ಆನಂದ ಉಂಟಾಯಿತೆಂಬ ಭಾವವು. "ನಾರಾಯಣಾಖ್ಯ ಪಿಯೂ

**ತನ್ಪತ್ತಿಲ್ಪಿ ನ್ನೈನಿಲಕ್ಕಿಲ್ ತಕವ್ರೋಕ್ಕತ್ತಿಲ್ ತಕ್ಕು**
**ವತ್ತೈಯುಣರ್ನ್ದದಲಿ ತ್ತಿಱನ್ವೈಯಾಕ್ಕಿಲ್ !**

ಷಂಪಿಬ ಜಿಹ್ವೇ ನಿರಂತರಂ " ಅಂದರೆ ಓ ನಾಲಿಗೆಯೇ, ಶ್ರೀಮನ್ನಾರಾಯಣನೆಂಬ ಅಮೃತವನ್ನು ನಿರಂತರ ಪಾನಮಾಡು " ಎಂದು ಹೇಳಿರುವ ಹಾಗೆ ನಮ್ಮಾಳ್ವಾರ್ ಪ್ರಬಂಧವಾದ ತಿರುವಾಯ್ಮೊಳಿಯಿಂದ ಅಂತಹ ಅಮೃತವನ್ನು ತಮ್ಮ ನಾಲಿಗೆಯು ಪಾನಮಾಡಿತೆಂಬಭಿಪ್ರಾಯವು.

2. ಇರೈಂಜುತಲಿಲ್ ಎಂದರೆ ಅವನನ್ನು ಆಶ್ರಯಿಸುವದರಲ್ಲೂ; ಎರಡನೇ ಪಾಶುರದಲ್ಲಿ " ಮೇವಿನೇನ್ ಅವನ್ಪೊನ್ನಡಿಮೆಯ್ಮೈಯೆ " ಆತನ ಸ್ವರ್ಣಮಯವಾದ ದಿವ್ಯ ಪಾದಕಮಲಗಳನ್ನು ಆಶ್ರಯಿಸಿದೆನು ಎಂಬದಾಗಿ " ಮಾಂ ವ್ರಜ " ಎಂಬ ವಾಕ್ಯದ ಸ್ವಾರಸ್ಯವನ್ನು ತೋರಿಸಿದರೆಂಬ ಭಾವವು.

3. ಇಶೆಯುಂಪೆತ್ತಿಲ್—ಅಂದರೆ ಅಂಗೀಕಾರಮಾಡಲ್ಪಟ್ಟ ಪುರುಷಾರ್ಥವನ್ನು ಕೊಡುವದರಲ್ಲೂ; ಮೂರನೇ ಪಾಶುರದಲ್ಲಿ " ತಿರುಉರುಕಾಣ್ಬನ್ನಾನ್ " ಅಂದರೆ ಶ್ರೀಮಹಾಲಕ್ಷ್ಮಿಯಿಂದ ಕೂಡಿಕೊಂಡಿರುವ ದಿವ್ಯಮಂಗಳವಿಗ್ರಹವನ್ನು ಸೇವಕನಾದ ನಾನು ನೋಡುವೆನು ಎಂಬುವದರಿಂದ ಪುರುಷಕಾರತ್ವ, ಉಪಾಯತ್ವ, ಉಪೇಯತ್ವಗಳಿಂದ ತುಂಬಾ ಅನುಗ್ರಹಮಯಳಾದವಳನ್ನು ಮುಂದಿಟ್ಟು ಸ್ವಾಮಿಯನ್ನು ಸಾಕ್ಷಾತ್ಕರಿಸುವೆನು ಎಂದು ಹೇಳಿರುವದರಿಂದ " ಪೇರ " ಅಂದರೆ ಪುರುಷಾರ್ಥವು, ಸಿದ್ಧವೆಂಬ ಭಾವವು.

4. ಇಕಳಾದಪಲ್ಲುರವಿಲ್—ಇಕಳಾದ - ಒಂದು ಕಾಲದಲ್ಲೂ ಬಿಟ್ಟುಹೋಗದ, ಪಲ್ಲುರವಿಲ್ - ಅನೇಕವಿಧ ಬಾಂಧವ್ಯದಲ್ಲೂ, ನಾಲ್ಕನೇ ಪಾಶುರದಲ್ಲಿ " ಅನ್ನೈಯಾಯ್ಯತ್ತನಾಯ್ ಎನ್ನೈ ಆಣ್ಡಿಡುಂ ತನ್ಮೈಯಾನ್ " ಎಂದರೆ " ತಾಯಿಯ ಹಾಗೆ ದೋಷವೆಣಿಸದೆ ಇರುವ ತಂದೆಯ ಹಾಗೆ ಹಿತವಾದ ಕಾರ್ಯದಲ್ಲಿ ಪ್ರೇರಿಸುವ, ಸೇವಕನಾದ ನನ್ನನ್ನು ನಿಯಮಿಸುವ, ಸ್ವಭಾವವುಳ್ಳ ಎಂಬದಾಗಿ ಹೇಳಿರುತ್ತಾರೆ.

ಅನ್ಬರ್ಕ್ಕೇಅವತರಿಕ್ಕು ಮಾಯನ್ನಿರ್ಕ್ಕ ವರು
ನಮ್ಬಿಕಟಿಮಿಳ್ ಶೆಯ್ದಾರ್ ತಾಳೆಗೊಂಡು ।

ಪರಮಾತ್ಮನಿಗೂ ನಮಗೂ ಇರುವ ನವವಿಧ ಸಂಬಂಧದಲ್ಲಿ ಇಲ್ಲಿ ಪಿತೃ ಪುತ್ರಸಂಬಂಧವೂ ಶೇಷಶೇಷೀ ಸಂಬಂಧವೂ ಹೇಳಲ್ಪಟ್ಟಿತು. ಪಿತಾ ಚ ರಕ್ಷಕಶ್ಶೇಷೀಭರ್ತಾಜ್ಞೇಯೋ ರಮಾಪತಿಃ । ಸ್ವಾಮ್ಯಾಧಾರೋ ಮಮಾತ್ಮಾ ಚ ಭೋಕ್ತಾ ಚಾದ್ಯಮನೂದಿತಃ ॥ ಎಂಬ ಶ್ಲೋಕದಲ್ಲಿ ನವವಿಧ ಸಂಬಂಧವೂ ಹೇಳಲ್ಪಟ್ಟಿರುತ್ತದೆ. ಅವು ಯಾವವೆಂದರೆ— (೧) ಪಿತೃ ಪುತ್ರ, (೨) ರಕ್ಷಕ ರಕ್ಷ್ಯ, (೩) ಶೇಷಿಶೇಷ, (೪) ಭರ್ತೃ ಭಾರ್ಯಾ, (೫) ಜ್ಞೇಯ ಜ್ಞಾತೃ, (೬) ಸ್ವಾಮಿ, ಸ್ವತ್ತು. (೭) ಆಧಾರಾಧೇಯ, (೮) ಶರೀರಿ ಶರೀರ, (೯) ಭೋಕ್ತೃಭೋಗ್ಯ ಎಂಬದಾಗಿ ಒಂಭತ್ತು.

(೫) ಇರಾಕಮಾತ್ತಿಲ್—ವಿಷಯಾಸಕ್ತಿಯನ್ನು ಹೋಗಲಾಡಿಸುವದರಲ್ಲೂ, ಇದು ಐದನೇ ಪಾಶುರದರ್ಥವು. "ನಂಬಿನೇನ್ ಮಡೆವಾರೆಯುಂ ಮುನ್ನೆಲಾಂ" ಮೊದಲು ಸ್ತ್ರೀಯಲ್ಲಾಸಕ್ತಮನಸ್ಕನಾಗಿ ಅದೇ ಭೋಗ್ಯವಸ್ತುವೆಂದು ಕಾಲವನ್ನೆಲ್ಲಾ ಕಳೆದೆನು. ಈಗ ತಿರಕ್ಕೂರುಗೂರ್ ನಂಬಿಯಾದ ನಮ್ಮಾಳ್ವಾರಿಗೆ "ಅಂಬನಾಯ್ ಅಡಿಯೇನ್ ಶತಿರ್ತ್ತು" ಅಂದರೆ ಪ್ರೀತಿಪಾತ್ರನಾದ ದಾಸನಾಗಿ ನಾನು ಅವರಿಗೆ ಶೇಷನಾಗಿ ಭಾಗ್ಯೋದಯವನ್ನು ಹೊಂದಿದೆನೆಂಬರ್ಥವು. ವಿಷಯಗಳಲ್ಲಿ ಜಿಹಾಸೆಯು ಸ್ವಾಮಿಕೃಪೆಯಿಂದುಂಟಾಗತಕ್ಕದ್ದು, ಅದು ಗುರುಕಟಾಕ್ಷದಿಂದಲೂ ಉಂಟಾಗುತ್ತದೆಂದು ಆಳ್ವಾರವರಭಿಪ್ರಾಯವು.

೬. ತನ್ಬತ್ತಿಲ್—ತನ್ನನ್ನು ಹೊಂದಲು ಗುರುಗಳು ತಾವೇ ಕರುಣಿಸುವದರಲ್ಲೂ; ಆರನೇ ಪಾಶುರದಲ್ಲಿ "ಎಂಬಿರಾನ್ ನಿನ್ರುತನ್ ಪುಕಳೇತ್ತವರುಳಿನಾನ್" ಸ್ವಾಮಿಯು ತಾನೇ ನಿಂತು ತನ್ನ ಕಲ್ಯಾಣ ಗುಣಗಳನ್ನು ಸ್ತೋತ್ರಮಾಡುವ ಹಾಗೆ ಕೃಪೆಗೈದನು ಎಂಬದಾಗಿ

**ತುನ್ಪತ್ತಮತುರಕವಿತೋನ್ರಕ್ಕಾಟ್ಟುಂ ತೊಲ್ವಳಿಯೇ**
**(ಕೊಲ್ವಳಿಯೆ) ನಲ್ವಳಿಗಳ್ ತುಣಿವಾರ್ ಕಟ್ಕೇ ॥೨॥**

ಹೇಳಿರುತ್ತದೆ. ಈಶ್ವರನು ಯಾವ ಯಾವ ಕೃಪೆಯನ್ನು ಗೈವನೋ ಅವೆಲ್ಲಾ ತಮ್ಮ ಗುರುಗಳೂ ಅನುಗ್ರಹಿಸುವರೆಂಬ ಭಾವವು.

7. ವಿನ್ಯೈವಿಲಕ್ಕಿಲ್—ಪಾಪವನ್ನು ಹೋಗಲಾಡಿಸುವದರಲ್ಲೂ, ಪರಮ ಭಾಗವತಾಶ್ರಯವು ಸರ್ವಪಾಪ ನಿವಾರಣೆಯನ್ನುಂಟುಮಾಡು ವದೆಂಬ ಭಾವವು. ಏಳನೇ ಪಾಶುರದಲ್ಲಿ “ ಪಂಡ್ಯೈವಲ್‌ವಿನ್ಯೈಪಾತ್ತಿ ಅರುಳಿನಾರ್ ” ಅಂದರೆ ಬಹುಕಾಲದಿಂದ ಬಂದ ಪ್ರಬಲವಾದ ಪಾಪಗ ಳನ್ನೆಲ್ಲಾ ನಾಶಮಾಡಿ ನಮ್ಮಾಳ್ವಾರ್‌ರವರು ಕೃಪೆಗೈದರು ಎಂಬದಾಗಿ ಹೇಳಿರುತ್ತಾರೆ. “ ನಹ್ಯಮ್ಮಯಾನಿ ತೀರ್ಥಾನಿ ನ ದೇವಾಮೃಚ್ಛಿಲಾ ಮಯಾಃ । ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ ॥” ಪುಣ್ಯತೀರ್ಥಗಳಿಂದಲೂ ದಿವ್ಯ ದೇಶಯಾತ್ರೆಮಾಡಿ ಸ್ವಾಮಿಸೇವೆಮಾ ಡುವದರಿಂದಲೂ ಬಹುಕಾಲಕ್ಕೆ ಪಾಪಗಳು ತೊಲಗಬಹುದು. ಭಾಗವತ ರಾದರೋ ಬರೀ ದರ್ಶನಮಾತ್ರದಿಂದಲೇ ಪಾಪಗಳನ್ನು ಹೋಗಲಾಡಿಸಿ ಪುನೀತರನ್ನಾಗಿ ಮಾಡುತ್ತಾರೆಂಬದಾಗಿ ಹೇಳಿರುವ ಮೇರಿಗೆ ತಮ್ಮ ಆಚಾರ್ಯರ ಮೂಲಕ ಸರ್ವಪಾಪನಿವಹವೂ ತೊಲಗಿತು ಎಂಬ ಭಾವವು.

ಸಿದ್ಧಿರ್ಭವತಿವಾನೇತಿ ಸಂಶಯೋಽಚ್ಯುತ ಸೇವಿನಾಂ ।
ನ ಸಂಶಯೋಽತ್ರ ತದ್ಭಕ್ತಪರಿಚರ್ಯಾರತಾತ್ಮನಾಂ ॥

ಸಿದ್ಧಿಯುಂಟಾದೀತೋ ಇಲ್ಲವೋ ಎಂಬ ಸಂಶಯವು ಒಂದು ವೇಳೆ ಅಚ್ಯುತಸೇವೆ ಮಾಡುವವರ ವಿಷಯದಲ್ಲಿದ್ದರೂ ಇರಬಹುದು. ಭಾಗವತ ಕೈಂಕರ್ಯದಲ್ಲೇ ಸಕ್ತವಾದ ಮನಸ್ಸುಳ್ಳವರಿಗೆ ಅಂತಹ ಸಂಶಯವೆಂದಿಗೂ ಇರುವದಿಲ್ಲವೆಂಬ ಭಾವವು.

8. ತಕವ್ರೋಕ್ಕತ್ತಿಲ್—ತಕವು - ಕೃಪಾ, ಓಕ್ಕತ್ತಿಲ್ - ಆ ಧಿಕ್ಯದಲ್ಲಿ, ಅಂದರೆ ಕೃಪಾಮಹಾತ್ಮ್ಯೆಯನ್ನು ತೋರಿಸುವದರಲ್ಲಿ. ಎಂಟನೆಯ ಪಾಶುರದಲ್ಲಿ ಅಮೋಘವಾದ ವಾಕ್ಕನ್ನುಪಯೋಗಿಸಿರು

ತ್ತಾರೆ. " ಅರುಳ್ಕೊಂಡೀರಿವ್ವುಲಗನಿಲ್ ಮಿಕ್ಕದೇ " ಪ್ರತಿಫಲ ಬಾದ ನ್ನೂ ಅಪೇಕ್ಷಿಸದೇ ಮಾಡುವ ಅರುಳ್, ಪ್ರೀತಿಯಾಗ, ಇವ್ವುಲಗ ನಿಲ್ - ಈ ಲೋಕದಲ್ಲಿ, ಮಿಕ್ಕದೇ - ತುಂಬಾ ಪ್ರಶಸ್ತವಾದುದು. ನಮ್ಮಾಳ್ವಾರ್ರವರು ತಮಗೊಂದು ಯಶಸ್ಸು ಮೊದಲಾದ ಯಾವ ವಿಧ ವಾದ ಪ್ರತಿಫಲವನ್ನೂ ಕೋರದೆ ಈ ಪೃಥ್ವಿಯ ಜೀವರುಗಳು ಉ ಜ್ಜೀವಿಸಲಿ, ಎಂಬ ಕೃಪೆಯಿಂದ ತಿರುವಾಯ್‌ಮೊಳಿಯನ್ನು ದಯಪಾಲಿ ಸಿವರಲ್ಲವೇ ? ಆದುದರಿಂದ ನಿರ್ವ್ಯಾಜಕೃಪೆಯಾಗ ಈ ಲೋಕದಲ್ಲಿ ಅಮೋಘವಾದುದೆಂಬದಾಗಿ ಹೇಳುತ್ತಾರೆ. ಸರ್ವೇಶ್ವರನಲ್ಲಿ ತೋರುವ ನಿರ್ವ್ಯಾಜಕೃಪೆಯು ನಮ್ಮ ಆಚಾರ್ಯರಲ್ಲೂ ವಿಶದವಾಗಿ ತೋರಿ, ಅದೀಗ ತಮ್ಮನ್ನುದ್ಧಾರಮಾಡಿತೆಂಬ ಭಾವವು.

9. ತತ್ತುವತ್ತೈಯುಣರ್ತ್ತುದದಿಲ್—ವೇದಾರ್ಥತತ್ವಗಳು ಮನ ಸ್ಸು ಹಿಡಿಯುವಹಾಗೆ ಬೋಧಿಸುವದರಲ್ಲೂ; ಒಂಭತ್ತನೇ ಪಾಶುರ ದಲ್ಲಿ " ವೇದತ್ತಿನುಳ್ಪ್ರೊರುಳ್‌ನಿರ್ಕಪ್ಪಾಡಿ ಎನ್‌ನೆಂಜುಳ್‌ನಿರುತ್ತಿನಾರ್ " ವೇದದ ಗೂಢಾಭಿಪ್ರಾಯಗಳನ್ನೆಲ್ಲಾ ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುವ ಹಾಗೆ ಮಾಡಿದರು ಎಂಬವಾಗಿ ಹೇಳಿರುತ್ತದೆ. ಹೀಗೆ ಜ್ಞಾನ ವನ್ನುಂಟುಮಾಡುವದು ಸರ್ವೇಶ್ವರನಿಗೆ ಸೇರಿದುದು. ಅದು ಈ ಆಚಾರ್ಯಾನುಗ್ರಹದಿಂದ ತಮಗುಂಟಾಯಿತೆಂಬ ಭಾವವು.

10. ತಣ್ಮೈಯಾಕ್ಕಿಲ್ — ಅಂತಹ ತನ್ನ ಸ್ವಭಾವವನ್ನೇ ಉಂ ಟುಮಾಡುವದರಲ್ಲೂ, ಹತ್ತನೇ ಪಾಶುರದಲ್ಲಿ " ಶೆಯಲ್‌ನನ್ಪಾಹಕತಿರು ತ್ತಿಪಣಿಕೊಳ್ವಾನ್ " ಎಷ್ಟು ಮೂಢನಾಗಿದ್ದರೂ ಭಾಗವತಾತಿಶಯ ವನ್ನು ತಿಳಿಯುವ ತನ್ನ ಸ್ವಭಾವವನ್ನುಂಟುಮಾಡಿಕೊಡುವನು. ತನ್ನ ಸ್ವಭಾವವನ್ನುಂಟುಮಾಡುವ ಶಕ್ತಿಯು ಸರ್ವೇಶ್ವರನಿಗುಂಟು. ಅಂತಹ ಶಕ್ತಿಯು ತಮ್ಮ ಆಚಾರ್ಯರಿಗೂ ಉಂಟೆಂಬ ಭಾವವು, ಹೀಗೆ ನಮ್ಮಾಳ್ವಾರ್ ತಿರುವಡಿಗಳನ್ನು ಆಶ್ರಯಿಸಿದ್ದರಿಂದ ಮೇಲೆ ಹೇಳಿದ ಹತ್ತು ವಿಧವಾದ ಪ್ರಯೋಜನಗಳುಂಟಾದವೆಂಬದಾಗಿ ಮಧುರ ಕವಿ ಯಾಳ್ವಾರವರು ಆಚಾರ್ಯನಿಷ್ಟೆಯೇ ಪರಮಶ್ರೇಯಸ್ಕರವೆಂಬದಾಗಿ ಭಾವಿಸಿದರು; " ಅನ್ಬರ್ಕೇಯವತರಕ್ಕುಮಾಯನ್ಶಿರ್ರ್ಕುಂ" ಅನ್ಬರ್ಕ-

ಭಕ್ತರಾದ ಭಾಗವತೋತ್ತಮರಿಗೋಸ್ಕರವಾಗಿಯೇ, ಅವತರಿಕ್ಕುಂ - ಅವತರಿಸುವ, ಆಯರ್ - ಆಶ್ಚರ್ಯಗುಣಚೇಷ್ಟಿತನಾದ, ಶ್ರೀಕೃಷ್ಣನು, ಇರುಕ್ಕುಂ - ಇದ್ದರೂನೂ, ಅಂದರೆ ಈ ಮೇಲೆ ಹೇಳಿದ ಹತ್ತು ಪ್ರಯೋಜನಗಳೂ ಸ್ವಾಮಿಯಾದ ಆಶ್ಚರ್ಯಗುಣಚೇಷ್ಟಿತನಾದ ಶ್ರೀಕೃಷ್ಣನಿಂದ ಹೊಂದಬಹುದಾಗಿದ್ದರೂ, ಅದನ್ನು ಬಿಟ್ಟು, ಅರುಮರೈಗಳೇ - ಸಾಧಾರಣವಾಗಿ ಗ್ರಹಿಸಲಸಾಧ್ಯವಾದ ವೇದಗಳನ್ನೂ, ತಮಿಳ್ ಶೆಯ್ದಾ - ದ್ರಾಮಿಡಭಾಷೆಯಲ್ಲಿ ತಿರುವಾಯ್ ಮೊಳಿರೂಪದಲ್ಲಿ ಅನುಗ್ರಹಿಸಿದ ನಮ್ಮಾಳ್ವಾರರ, ತಾಳೇಗೊಂಡು - ತಿರುವಡಿಗಳನ್ನಾಶ್ರಯಿಸಿ, ತುನ್ಬತ್ತ - ದುಃಖವನ್ನು ಹೋಗಲಾಡಿಸುವ (ದುಃಖವೇನು ಎಂದರೆ "ಸಿದ್ಧಿರ್ಭವತಿವಾನೇತಿ ಸಂಶಯೋಚ್ಯುತಸೇವಿನಾಂ । ನಶಂಸಯೋತ್ರತದ್ಭಕ್ತಪರಿಚರ್ಯಾರತಾತ್ಮನಾಂ ॥" ಎಂಬ ಹಾಗೆ ಸ್ವಾಮಿ ಪಾದವನ್ನು ಆಶ್ರಯಿಸಿದರೆ ಫಲಸಿದ್ಧಿಯುಂಟಾಗುತ್ತದೋ ಇಲ್ಲವೋ ಎಂಬ ಸಂಶಯರೂಪವಾದ ದುಃಖವಿರಬಹುದು. ಆತನ ಪರಮಭಕ್ತರ ಪಾದವನ್ನಾಶ್ರಯಿಸಿದವರಿಗೆ ಅಂತಹ ದುಃಖವಿರುವದಿಲ್ಲವೆಂಬ ಭಾವವು.) ಮಧುರಕವಿತೋನ್ರ ಕಾಟ್ಟುಂ - ಮಧುರಕವಿಯಾಳ್ವಾರವರು ಬಹು ವಿಶದವಾಗಿ ಕಣ್ಣಿನುಣ್ ಶಿರುತ್ತಾಂಬು ಎಂಬುವ ಹತ್ತು ಪಾಶುರಗಳಿಂದ ತೋರಿಸಿರುವ, ತೊಲ್ಪಳಿಯೇ - ಅನಾದಿಯಾಗಿ ಬಂದಿರುವ ಆಚಾರ್ಯಪರಾಕಾಷ್ಠ ಪ್ರದರ್ಶಕವಾದ ಮಾರ್ಗವೇ, ತುಣಿವಾರ್ಕಳ್ಕ - ವಿಶ್ವಾಸವುಳ್ಳವರುಗಳಿಗೆ, ನಲ್ವಳಿಗಳ್ - ಸಮೀಚೀನವಾದ ಮಾರ್ಗಗಳು. ಅಂದರೆ ಮುಮುಕ್ಷುವಾದವನು ಮುಖ್ಯವಾಗಿ ಸ್ವಾಮಿಯನ್ನು ಪಡೆದು ಸಿದ್ಧಿ ಹೊಂದಬೇಕೆಂಬ ಅಪೇಕ್ಷೆ ಇರುವನಾದುದರಿಂದ ಅದನ್ನು ಆಚಾರ್ಯೋಪಸದನದ್ವಾರಾ ಹೊಂದತಕ್ಕದ್ದು. ಅನಾದಿಯಾಗಿ ಬಂದಿರುತ್ತದೆಯಾದುದರಿಂದ ಅತ್ಯಾವಶ್ಯಕವೆಂತಲೂ ಇಂತಹ ಆಚಾರ್ಯಪರಾಕಾಷ್ಠ ಮಧುರಕವಿಗಳು ಕಣ್ಣಿನುಣ್ ಶಿರುತ್ತಾಂಬಿನಲ್ಲಿ ಬಹುನಿಪುಣತರವಾಗಿ ತೋರಿಸಿರುತ್ತಾರೆಂತಲೂ, ಅಂತಹ ಮಹನೀಯರು ತೋರಿದ ಮಾರ್ಗವೇ ನಮಗೂ ಅನುಷ್ಠೇಯವಾದುದೆಂಬುದಾಗಿಯೂ ಅಪ್ಪಣೆಕೊಡಿಸುತ್ತಾರೆ.

ಮೇಲೆ ಹೇಳಿದ ಶತ್ರುಘ್ನ ಪ್ರಯೋಜನಗಳು ಸ್ವಾಮಿಯ ಮೂಲಕ ಹೊಂದಬಹುವಾಗಿದ್ದರೂ ಅದನ್ನು ಬಿಟ್ಟು ಶತ್ರುಘ್ನರು, ಭರತನ ತಿರುವಡಿಗಳನಾಶ್ರಯಿಸಿದಂತೆ ಮಧುರಕವಿಯಾಳ್ವಾರ್ರವರು ನಮ್ಮಾಳ್ವಾರವರ ತಿರುವಡಿಗಳನ್ನು ಆಶ್ರಯಿಸಿದರಾದುದರಿಂದ ಅದೇ ಉತ್ಕೃಷ್ಟವಾದ ಮಾರ್ಗವು. ಅದನ್ನೇ ಸರ್ವಮುಮುಕ್ಷುಕ್ಕಳೂ ಅನುಷ್ಠಿಸತಕ್ಕದ್ದೆಂಬ ಭಾವವು.

ಹೀಗೆ ಸರ್ವೇಶ್ವರನಿಂದ ಹೊಂದಬಹುದಾದ ಪ್ರಯೋಜನಗಳನ್ನೆಲ್ಲಾ ಆಚಾರ್ಯರ ಮೂಲಕ ಹೊಂದುವದರಿಂದಲೇ " ಯಸ್ಯದೇವೇಪರಾಭಕ್ತಿಃ ಯಥಾದೇವೆ ತಥಾಗುರೌ " ಎಂದು ಹೇಳಿರುವ ಮೇರೆಗೆ ವೈಕುಂಠಪತಿಯಲ್ಲಿ ತೋರಿಸುವ ಭಕ್ತಿಯು ಆಚಾರ್ಯರಲ್ಲೂ ಇರಬೇಕೆಂಬುವದನ್ನು ಈ ಗ್ರಂಥಕರ್ತರೇ ನ್ಯಾಸವಿಂಶತಿಯಲ್ಲಿ ಹೇಳಿರುತ್ತಾರೆ.

ಅಜ್ಞಾನಧ್ವಾಂತರೋಧಾದ ಘಪರಿಹರಣಾದಾತ್ಮಸಾಮ್ಯಾವಹತ್ವಾ!
ಜ್ಜನ್ಮಪ್ರಧ್ವಂಸಿ ಜನ್ಮಪ್ರದಗರಿಮತಯಾ ದಿವ್ಯದಿಷ್ಟಿಪ್ರಭಾವಾತ್ ।
ನಿಷ್ಪ್ರತ್ಯೂಹಾನೃಶಂಸ್ಯಾನ್ನಿಯತರಸತಯಾನಿತ್ಯಶೇಷಿತ್ವಯೋಗಾ ।
ದಾಚಾರ್ಯಸ್ಸದ್ಭಿರಪ್ರತ್ಯುಪಕರಣಧಿಯಾದೇವವತ್ಸ್ಯಾದುಪಾಸ್ಯಃ ॥

ಆಚಾರ್ಯನು ಈತನು ಮಾಡಿದ ಉಪಕಾರಕ್ಕೆ ಸರಿಯಾಗಿ ಪ್ರತ್ಯುಪಕಾರವನ್ನೆಸಗುವದು ಸಾಧ್ಯವಲ್ಲವಾದುದರಿಂದ ಅದಕ್ಕೆ ಪ್ರತಿಯಾಗಿ ಮಾಡುತ್ತೇನೆಂಬ ಬುದ್ಧಿ ಇಲ್ಲದೆ ಪರಮಾದರದಿಂದ ದೇವರನ್ನು ಹೇಗೆ ಉಪಾಸಿಸುತ್ತೇವೋ ಹಾಗೆ ಉಪಾಸಿಸಲು ಯೋಗ್ಯನು ಎಂದು ಹೇಳುತ್ತಾರೆ. ಎತಕ್ಕೆಂದರೆ ಕಾರಣಗಳನ್ನು ಹೇಳುತ್ತಾರೆ. ಆ ಕಾರಣಗಳು ಆಚಾರ್ಯನಲ್ಲೂ ದೇವರಲ್ಲೂ ಸಮವೆಂದು ತೋರಿಸುತ್ತಾರೆ.

ಅಜ್ಞಾನಧ್ವಾಂತರೋಧಾತ್ - ಅಜ್ಞಾನವೆಂಬ ಕತ್ತಲೆಯನ್ನು ಇಬ್ಬರೂ ಹೋಗಲಾಡಿಸುತ್ತಾರೆ, ಅಘಪರಿಹರಣಾತ್ - ಪಾಪಗಳನ್ನು ಇಬ್ಬರೂ ಪರಿಹರಿಸುತ್ತಾರೆ, ಆತ್ಮಸಾಮ್ಯಾವಹತ್ವಾತ್ - ಸ್ವಾಮಿಯು ಮುಕ್ತಿಯನ್ನಿತ್ತು ತನಗೆ ಸಮಾನನನ್ನಾಗಿ ಮಾಡಿಕೊಳ್ಳುತ್ತಾನೆ. ಆಚಾರ್ಯನೂ ಶಿಷ್ಯನನ್ನು ತನಗೆ ಸಮಾನವಾಗಿ ಭಾವಿಸಿ ತನ್ನ ಸ್ವಭಾವವನ್ನೇ ಉಂಟುಮಾಡುವನು, ಜನ್ಮಪ್ರಧ್ವಂಸ ಜನ್ಮಪ್ರದಗರಿಮತಯಾ ದಿವ್ಯದೃಷ್ಟಿಪ್ರಭಾವಾತ್ - ಇಬ್ಬರೂ ಈ ಜೀವನಿಗೆ ಪುನಃಪುನಃ ಜನ್ಮವೆತ್ತುವ ಜನ್ಮಹೋಗಲಾಡಿಸಿ ಪುನರಾವರ್ತಿಯಿಲ್ಲದ ಅಪ್ರಾಕೃತಜನ್ಮವುಂಟುಮಾಡುವದರಿಂದ ದಿವ್ಯವಾದ ಐಶ್ವರ್ಯವನ್ನು ಹೊಂದಿಸುವ ಪ್ರಭಾವವುಳ್ಳವರು, ನಿಷ್ಪ್ರತ್ಯೂಹಾನೃಶಂಸ್ಯಾತ್ - ತಡೆಯಿಲ್ಲದಿರುವ ಯಾರನ್ನೂ ಹಿಂಸಿಸದೆ ಇರುವ ಋಜುಭಾವವನ್ನು ಹೊಂದಿರುವವರು, ನಿಯತರಸತಯಾ ನಿತ್ಯಶೇಷಿತ್ವಯೋಗಾತ್ - ನಿಯತವಾದ ಆನಂದಭಾವವುಳ್ಳೋಣದರಿಂದ ಸದಾಶೇಷಿಯಾಗಿ ಇಬ್ಬರೂ ಜೀವನ ವಿಷಯದಲ್ಲೂ ಏರ್ಪಟ್ಟಿರುತ್ತಾರೆ. ಈ ಕಾರಣಗಳಿಂದ ಆಚಾರ್ಯನು ದೇವರೋಪಾದಿಯಲ್ಲಿ ನಮಗೆ ಉಪಾಸ್ಯನೆಂದು ಹೇಳಿರುತ್ತಾರೆ. ಇನ್ನೊಂದು ಸ್ಥಳದಲ್ಲಿ "ಆಚಾರ್ಯಾದಿಹ ದೇವತಾಂ ಸಮಧಿಕಾ ಮನ್ಯಾಂ ನಮನ್ಯಾಮಹೆ" ಅಂದರೆ ಆಚಾರ್ಯರಿಗಿಂತ ಅಧಿಕರಾದ ಅಥವಾ ಸಮನಾದ ಬೇರೆ ದೇವತೆಯನ್ನು ತಾನು ಕಾಣಲಿಲ್ಲವೆಂಬದಾಗಿಯೂ ಹೇಳಿರುತ್ತಾರೆ. ಅಂದರೆ ಸ್ವಾಮಿಯು ಆಚಾರ್ಯರಿಗಿಂತ ಸಮನು ಅಧಿಕನೂ ಅಲ್ಲವೇ ಎಂದರೆ ಅಲ್ಲವೆಂಬದಾಗಿ ಉಪಪಾದಿಸುತ್ತಾರೆ. "ಯಸ್ಯಾಸಾ ಭಜತೇ ಕದಾಚಿದಜಹದ್ಭೂಮಾಸ್ವಯಂ ಭೂಮಿಕಾಂ ಮಗ್ನಾನಾಂ ಭವಿನಾಂ ಭವಾರ್ಣವ ಸಮುತ್ತಾರಾಯ ನಾರಾಯಣಃ" ಅಂದರೆ ಈ ಮಹಾನುಭಾವನು ಯಾವಾಗಲಾದರೂ ಒಂದು ಕಾಲದಲ್ಲಿ ಅವತಾರಗಳನ್ನೆತ್ತಿ ಸಂಸಾರಿಗಳನ್ನು ಸಂಸಾರಸಮುದ್ರದಿಂದ ದಾಟಿಸುವನು. ನಮ್ಮ ಆಚಾರ್ಯರಾದರೂ ಯಾವಜ್ಜೀವವೂ ಆ ಕೆಲಸಕ್ಕಾಗಿಯೇ ಕಂಕಣಬದ್ಧರಾಗಿ ಕೂತಿರುವರು. ಆದುದರಿಂದ ನಮ್ಮ ಆಚಾರ್ಯರು ಸ್ವಾಮಿಗಿಂತಲೂ ಮೇಲೆಂಬದಾಗಿ ಭಾವವು.

**ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ ।**
**ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್ ॥೨॥**

ಅವತಾರದ ಉದ್ದೇಶ್ಯವು—

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

ಎಂಬ ಶ್ಲೋಕದಲ್ಲಿ ಹೇಳಿರುವ ಹಾಗೆ ಮೂರು—ಸಾಧುಜನಗಳ ಪರಿತ್ರಾಣವು, ದುಷ್ಟರ ನಿಗ್ರಹವು, ಧರ್ಮೋಪದೇಶವು. ಹೀಗೆ ಮೂರೂ ರಾಮಕೃಷ್ಣಾದ್ಯವತಾರಗಳಲ್ಲಿ ನಡೆದಿದ್ದರೂ ಸ್ವಾಮಿಗೆ ಈ ಮೂರರಲ್ಲೂ ತುಂಬಾ ಮುಖ್ಯವಾಗಿ ಅಭಿಮತವಾದುದು ಸಾಧುಪರಿತ್ರಾಣವೆಂದೂ ಮಿಕ್ಕ ಎರಡೂ ಯಾದೃಚ್ಛಿಕವಾಗಿ ಉಂಟುಮಾಡಿದ ಪ್ರಯೋಜನಗಳೆಂದೂ ಹೇಳುವದಕ್ಕಾಗಿಯೇ ಈ ಶ್ಲೋಕದಲ್ಲೂ "ಪರಿತ್ರಾಣಾಯ ಸಾಧೂನಾಂ" ಎಂಬುದು ಪ್ರಥಮತಃ ನಿರ್ದೇಶಿಸಲ್ಪಟ್ಟಿರುತ್ತದೆಂದು ಭಾವಿಸಿ ಸ್ವಾಮಿ ದೇಶಿಕರವರೂ ಸಹ "ಅನ್ಬರ್ಕ್ಕೇ ಅವತರಿಕ್ಕುಮಾಯನ್ ನಿರ್ಕ" ಎಂಬಲ್ಲಿ ಅನ್ಬರ್ಕ್ಕೇ ಎಂಬುವದರ "ಏವ"ಕಾರದಿಂದ ಅಪ್ಪಣೆ ಕೊಡಿಸಿರುತ್ತಾರೆ.

**ಅರ್ಥ**—ಈ ಮಧುರಕವಿಗಳು ಅವಲಂಬಿಸಿದುದೇ ಸರಿಯಾದ ಮಾರ್ಗವೆಂದು ಸಪ್ರಮಾಣವಾಗಿ ತಿಳಿಸುತ್ತಾರೆ. ಪಾಪಿಷ್ಠಃ - ಪಾಪಿಯಾದ, ಕ್ಷತ್ರಬಂಧುಶ್ಚ - ಕ್ಷತ್ರಬಂಧುವೂ (ಕ್ಷತ್ರಬಂಧುವೆಂದರೆ ತುಂಬ ಪಾಪಿಯಾದುದರಿಂದ ಕ್ಷತ್ರಿಯ ರಾಜರಲ್ಲಿ ಅಧಮನೆಂಬರ್ಥವು), ಪುಣ್ಯಕೃತ್ - ಪುಣ್ಯಮಾಡಿದ, ಪುಂಡರೀಕಶ್ಚ ಪುಂಡರೀಕನೂ ಕೂಡ, ಆಚಾರ್ಯವತ್ತಯಾ - ಆಚಾರ್ಯರನ್ನು ಹೊಂದಿದುದರಿಂದಲೇ, ಮುಕ್ತೌ - ಮುಕ್ತಿಯನ್ನು ಹೊಂದಿದರು ; ತಸ್ಮಾತ್ - ಆ ಕಾರಣದಿಂದ, ಆಚಾರ್ಯವಾನ್ - ಗುರುವನ್ನು ಹೊಂದಿದವನು ಅಂದರೆ ಆಶ್ರಯಿಸಿದವನು, ಭವೇತ್ - ಆಗತಕ್ಕದ್ದು. ಅಂದರೆ ಪಾಪಕರ್ಮಗಳೂ ಪುಣ್ಯಕರ್ಮಗಳೆರಡೂ ಮೋಕ್ಷಪ್ರತಿಬಂಧಕಗಳು. ಹಾಗೆ ಮೋಕ್ಷಪ್ರಾಪ್ತಿಗೆ ವಿಘ್ನಗಳು ಬಾರದೇ ಇರುವದಕ್ಕಾಗಿ ಆಚಾರ್ಯನನ್ನು ಆಶ್ರಯಿಸಿ, ಪ್ರಪದ

**ಎನ್ರು ಆಚಾರವತ್ತಯೋ: ಸರ್ವರುಕ್ಕುಂ ಮೋಕ್ಷಕಾರಣ ಮೆನ್ನ ರುದಿಯಿಟ್ಟಾರ್‌ಗಳ್. ಮುಮುಕ್ಷುವುಕ್ಕಾಚಾರ್ಯವಂಶಂ ಭಗವಾನಳವುಂ ಶೆಲ್ಲವನು ಸಂಧಿಕ್ಕವೇಣು ಮೆನ್ರೋದಪ್ಪಟ್ಟದು2.**

ನಾನುಷ್ಠಾನದ್ವಾರಾ ಕರ್ಮಗಳ ಬಂಧನವನ್ನು ನೀಗಿಕೊಂಡು ಮೋಕ್ಷವನ್ನು ಪಡೆಯತಕ್ಕದ್ದೆಂಬ ಭಾವವು. ಪಾಪವೇನೋ ಮೋಕ್ಷಪ್ರಾಪ್ತಿಗೆ ಪ್ರತಿಬಂಧಕವಾಗಿರಬಹುದು, ಪುಣ್ಯವು ಹೇಗೆ ಪ್ರತಿಬಂಧಕವೆಂದರೆ, ಪುಣ್ಯವು ಸ್ವರ್ಗಲೋಕಾದಿಗಳ ಪ್ರಾಪ್ತಿಯನ್ನು ಕೊಟ್ಟೀತೇ ವಿನಾ ಪರಮಪದವನ್ನು ಕೊಡಲಾರದು. ಆ ಸ್ವರ್ಗಭೋಗವು ಕಳದ ನಂತರ "ಕ್ಷೀಣೇಪುಣ್ಯೇಮರ್ತ್ಯಲೋಕಂವಿಶಂತಿ" (ಭ. ಗೀ. ೯-೨೧) ಎಂಬ ಗೀತಾವಾಕ್ಯಪ್ರಕಾರ ಪುನಃ ಈ ಭೂಲೋಕಕ್ಕೆ ಬರಬೇಕಾಗುತ್ತದೆ. ಆದುದರಿಂದ "ತದಾವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ" (ಮುಂಡಕ, ೩, ೧-೩) ಪುಣ್ಯಪಾಪಗಳೆರಡನ್ನೂ ಕಳದುಕೊಂಡು ನಿರ್ದುಷ್ಟನಾಗಿ ಜೀವಾತ್ಮನು ಸಾಯುಜ್ಯವನ್ನು ಹೊಂದುವನು ಎಂಬದಾಗಿ ಶ್ರುತಿಯು ಹೇಳುತ್ತದೆ. "ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋರ್ಜುನ" ಎಂಬದಾಗಿಯೂ ಹೇಳಲ್ಪಟ್ಟಿರುತ್ತದೆ. ಆದುದರಿಂದ ಪಾಪಿಷ್ಠನೂ ಪುಣ್ಯವಂತನೂ ಇಬ್ಬರಿಗೂ ಕೂಡ ಆಚಾರ್ಯನು ಆವಶ್ಯಕವೆಂಬರ್ಥವು. "ಆಚಾರ್ಯವಾನ್ ಪುರುಷೋವೇದ" ಆಚಾರ್ಯನನ್ನು ಹೊಂದಿರುವ ಪುರುಷನು ಪರಬ್ರಹ್ಮವನ್ನು ತಿಳಿಯುತ್ತಾನೆ ಎಂಬದಾಗಿಯೂ "ತದ್ವಿಜ್ಞಾನಾರ್ಥಂ ಸಗುರುಮೇವಾಭಿಗಚ್ಛೇತ್, ಆಚಾರ್ಯಾದ್ಧೈವವಿದ್ಯಾವಿದಿತಾ ಸಾಧಿಷ್ಠಂ ಪ್ರಾಪತ್" ಆ ಪರಬ್ರಹ್ಮವನ್ನು ತಿಳಿಯುವದಕ್ಕಾಗಿ ಆತನು ಗುರು

1 ಶೆಲ್ಲ - ಪರಿಯಂತರವೂ ಹೊಂದಿ.

2 ಓದಪ್ಪಟ್ಟದು - ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ. ಆದರೆ ಶ್ರುತಿಪ್ರಮಾಣವನ್ನು ಏಕೆ ಉದಹರಿಸಲಿಲ್ಲವೆಂದರೆ ಸ್ತ್ರೀಶೂದ್ರಾದಿಗಳಿಗೂ ಉಪಯೋಗವಾಗಿರುವದಕ್ಕಾಗಿ ಉದಹರಿಸಲಿಲ್ಲವು. ರಹಸ್ಯಾಮ್ನಾಯ ಬ್ರಾಹ್ಮಣ.

ವನ್ನೇ ಆಶ್ರಯಿಸತಕ್ಕದ್ದು.ಅಂತಹ ಆಚಾರ್ಯನಿಂದ ತಾನೇ ವಿದ್ಯೆಯು ತಿಳಿದಂತಾದ್ದಾಗಿ ಪ್ರತಿಷ್ಠೆಯನ್ನು ಹೊಂದುತ್ತದೆ ಎಂಬದಾಗಿಶ್ರುತಿಯು ಹೇಳುತ್ತದೆ. " ಧ್ಯಾಯೇಜ್ಜಪೇನ್ನಮೇದ್ಭಕ್ತ್ಯಾಭಜೇದಭ್ಯರ್ಚಯೇನ್ಮುದಾ " ಗುರುವನ್ನು ಭಕ್ತಿಯಿಂದ ಧ್ಯಾನಿಸತಕ್ಕದ್ದು, ಅವರ ನಾಮವನ್ನು ಜಪಿಸತಕ್ಕದ್ದು, ಅವರಿಗೆ ನಮಿಸತಕ್ಕದ್ದು ಅವರನ್ನು ಜಪಿಸತಕ್ಕದ್ದು (ತನಿಯುವನ್ನು ಹೇಳತಕ್ಕದ್ದು) ಅವರ ಪಾದುಕೆಯನ್ನರ್ಚಿಸತಕ್ಕದ್ದು ಎಂಬದಾಗಿಯೂ ಹೇಳಿರುತ್ತದೆ. ಕ್ಷತ್ರಬಂಧುವಿನ ವೃತ್ತಾಂತವು ಪಾದ್ಮೋತ್ತರ ಪುರಾಣದಲ್ಲಿ ಸೂಚಿಸಲ್ಪಟ್ಟಿರುತ್ತದೆ. ಈತನು ಒಬ್ಬ ರಾಜನಾಗಿದ್ದರೂ ಕಾಡಿನಲ್ಲಿದ್ದುಕೊಂಡು ಬಂದು ದುಷ್ಕರ್ಮಪರಿಪಾಕದಿಂದ ಅಲ್ಲಿಗೆ ಬರುವ ಜನಗಳನ್ನೂ ತಪಸ್ಸಿನಲ್ಲಿರುವ ಋಷಿಗಳನ್ನೂ ಹೊಡೆದು ಬಡಿದು ಹಿಂಸಿಸಿ ಬಹುಪಾಪಗಳನ್ನು ಮಾಡುತ್ತಿದ್ದನು. ಹೀಗಿರುವಲ್ಲಿ ಒಂದುದಿನ ಈತನ ಹಿಂದಿನ ಸುಕೃತವಿಶೇಷದಿಂದ ಈತನ ದೃಷ್ಟಿಪಥಕ್ಕೆ ಮಹಾಭಾಗವತೋತ್ತಮರಾದ ನಾರದಮಹರ್ಷಿಗಳು ಬೀಳಲು, ಅವರನ್ನೂ ಈತನು ಎಂದಿನಂತೆ ಹೊಡೆಯಲು ಹೋಗಲು, "ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ " ಎಂಬ ಶುಕಮಹರ್ಷಿಯ ಉಕ್ತ್ಯನುಸಾರ ಆ ಭಾಗವತೋತ್ತಮರ ಕಟಾಕ್ಷವೀಕ್ಷಣದಿಂದ ಸತ್ವವು ತಲೆದೋರಿ ಸ್ವಲ್ಪ ಸುಮ್ಮನಿರಲು. ಆಗ ನಾರದಮಹರ್ಷಿಯು, ಆತನನ್ನು ಪ್ರಶ್ನಿಸುವರೇನೆಂದರೆ, " ಓ ಕ್ಷತ್ರಿಯನೇ ಈಗ ನೀನು ಮಾಡುತ್ತಿರುವ ಕರ್ಮವೇನು ಪಾಪವೆಂದು ತಿಳಿದಿರುವಿಯೋ ಇಲ್ಲವೇ ಪುಣ್ಯವೆಂದು ತಿಳಿದಿರುವಿಯೋ, ಹೀಗೆ ಮಾಡುವದು ನೀನು ನಿನ್ನ ಹೆಂಡತಿ ಮಕ್ಕಳು ಬಂಧುಗಳ ಸಂರಕ್ಷಣಾರ್ಥವಾಗಿ ಎಂಬದಾಗಿ ತೋರುತ್ತದೆ,ಅವರುಗಳು ನಿನ್ನೊಡನೆ ಧನಕ್ಕೂ ಅದರೊಂದಿಗೆ ಉಂಟಾಗುವ ಸುಖಕ್ಕೂ ಸಹ ಭಾಗಿಗಳಾಗಿರುತ್ತಾರೆ. ಹಾಗೆಯೇ ಈ ನೀನು ಮಾಡುವ ಇಂತಹ ದುಷ್ಕೃತ್ಯದಿಂದುಂಟಾಗುವ ಪಾಪಗಳಿಗೂ ಭಾಗಿಗಳಾಗುತ್ತಾರೆಯೇ ಎಂಬುದನ್ನು ಅವರೊಂದಿಗಾಲೋಚಿಸಿ ಬಾ. ಅದುವರಿವಿಗೂ ನಾನು ಈ ಸ್ಥಳ ಬಿಟ್ಟು ಹೋಗುವದಿಲ್ಲ. ಅನಂತರ ನಿನ್ನ ಇಷ್ಟಾನುಸಾರ ನಡಿಯಬಹುದೆಂಬದಾಗಿ ಹೇಳಲು, ಈತನು ಬೇಗನೆ

ತನ್ನ ಸ್ಥಳಕ್ಕೆ ಹೋಗಿ, ತನ್ನ ಬಂಧುವರ್ಗವನ್ನೆಲ್ಲಾ ಪಾಪಕೃತ್ಯಗಳಿಗೂ ಭಾಗಿಗಳಾಗಬೇಕೆಂದು ಎಷ್ಟು ಹೇಳಿದರೂ ಒಪ್ಪಲಿಲ್ಲವಾದುದರಿಂದ, ಈತನಿಗೆ ಜ್ಞಾನೋದಯವುಂಟಾಗಿ ಈ ವೃತ್ತಾಂತವನ್ನು ಮಹರ್ಷಿಗೆ ತಿಳಿಸಿದುದಲ್ಲದೆ ತನ್ನ ಅಕೃತ್ಯದ ವಿಷಯದಲ್ಲಿ ಮಹತ್ತಾದ ಶೋಕವು ಹುಟ್ಟಿ ಇದಕ್ಕೇನು ಭೇಷಜವೆಂಬದಾಗಿ ಪ್ರಾರ್ಥಿಸಲು, ಮಹರ್ಷಿಯು ತುಂಬಾ ಕೃಪಾಳುವಾದುದರಿಂದ ಆತನಿಗೆ ಮೂಲಮಂತ್ರವನ್ನುಪದೇಶಿಸಿ, ಶರಣಾಗತಿಯನ್ನನುಷ್ಠಿಸಿ, ಪಾಪಗಳನ್ನೆಲ್ಲಾ ನೀಗಿಕೊಂಡು ಪರಿಶುದ್ಧನಾಗಿ ಕೃತಾರ್ಥನಾಗಿಕಡೆಗೆ ಈ ನಾರದರ ಕೃಪಾಪ್ರಭಾವವದಿಂದ ಮೋಕ್ಷವನ್ನು ಹೊಂದಿದನು. ಇದೀಗ ಕ್ಷತ್ರುಬಂಧುವಿನ ವೃತ್ತಾಂತವು.

ಪುಂಡರೀಕವೃತ್ತಾಂತವೂ ಪಾದ್ಮೋತ್ತರ ಪುರಾಣದಲ್ಲಿ ಬರುತ್ತದೆ. ಇವರು ಬ್ರಾಹ್ಮಣಕುಲದಲ್ಲಿ ಹುಟ್ಟಿ ತುಂಬಾ ಸದ್ವೃತ್ತಿಯಲ್ಲಿದ್ದುಕೊಂಡು, ವಿಪುಳ ಧನವನ್ನು ಸಂಪಾದಿಸಿ, ತುಂಬಾ ಧರ್ಮ ಕೆಲಸವನ್ನು ಮಾಡುತ್ತಿದ್ದರು. ಇದೂ ಅಲ್ಲದೆ ವೇದಾಧ್ಯಯನ, ಶಾಸ್ತ್ರಜ್ಞಾನ ಮೊದಲಾದವುಗಳನ್ನು ಪಡೆದು ಮಾತಾಪಿತೃಶುಶ್ರೂಷೆಯಲ್ಲೂ ನಿರತರಾಗಿದ್ದರು. ಇನ್ನೂ ಅನೇಕ ದಿವ್ಯದೇಶಯಾತ್ರೆಗಳನ್ನೂ ಮಾಡಿದ್ದಲ್ಲದೆ ಭಕ್ತಿಮಾರ್ಗದಲ್ಲೂ ತುಂಬಾ ನಿರತರಾಗಿದ್ದರೂ ಸರ್ವೇಶ್ವರನನ್ನು ಸಾಕ್ಷಾತ್ಕಾರಮಾಡಲು ಇವರಿಗೆ ಸಾಧ್ಯವಾಗಲಿಲ್ಲವು. ಹೀಗಿರುವಾಗ ನಾರದ ಮಹರ್ಷಿಯ ಸಂದರ್ಶನವು ಇವರಿಗೆ ದೊರೆಯಲು, ಅವರು ಪರಮಕೃಪೆಯಿಂದ ಈ ಪುಂಡರೀಕರಿಗೆ ಅಷ್ಟಾಕ್ಷರ ಮಂತ್ರೋಪದೇಶ ಮಾಡಿ ಅದರ ಉಪಾಸನಮೂಲಕ ಪರಬ್ರಹ್ಮಸಾಕ್ಷಾತ್ಕಾರ ಉಂಟಾಗುವದೆಂದು ಹೇಳಿ ಹೋದುದರಿಂದ ಬ್ರಹ್ಮಸಾಕ್ಷಾತ್ಕಾರವೂ ಮೋಕ್ಷಪ್ರಾಪ್ತಿಯೂ ಉಂಟಾಯಿತೆಂಬದಾಗಿ ಹೇಳಿರುತ್ತದೆ.

ಆದರೆ ಪಾಪವೇನೋ ಮೋಕ್ಷಪ್ರತಿಬಂಧಕವಾಗಿ ಆಚಾರ್ಯ ಮುಖೇನ ಮಾಡುವ ಪ್ರಪತ್ತಿಯಿಂದ ನಿವರ್ತಕವಾಗಬಹುದು. ಪುಣ್ಯವೂ ಕೂಡ ಹಿಂದೆ ಹೇಳಿದಹಾಗೆ ಮೋಕ್ಷಪ್ರತಿಬಂಧಕವಾದುದರಿಂದ ಪಾಪಿಷ್ಠನಿಗೂ ಪುಣ್ಯಶಾಲಿಗೂ ಕೂಡ ಆಚಾರ್ಯನು ತುಂಬಾ

ಅವಶ್ಯಕವೆಂದು ಹೇಳುವದಕ್ಕಾಗಿಯೇ " ಆಚಾರ್ಯವತ್ತ್ವಯೇ " ಎಂಬಲ್ಲಿ ‹ ಏವ ' ಕಾರವನ್ನುಪಯೋಗಿಸಿರುತ್ತಾರೆ.

ಹೀಗೆ ಪ್ರತಿಯೊಬ್ಬರಿಗೂ ಒಳ್ಳೇ ಶ್ರೇಷ್ಠನಾದ ಗುರುವನ್ನು ಹೊಂದಿರೋಣವೇ ಮೋಕ್ಷಕ್ಕೆ ಸಾಧನವೆಂಬದಾಗಿ ಜ್ಞಾನಿಗಳು ಸಿದ್ಧಾಂತವಮಾಡಿರುತ್ತಾರೆ. ಮೋಕ್ಷಾರ್ಥಿಯಾದವನು ಆಚಾರ್ಯವಂಶ ಮೊದಲುಗೊಂಡು ಭಗವಂತನ ಪರಿಯಂತರವೂ (ಪ್ರತಿನಿತ್ಯದಲ್ಲೂ) ಅನುಸಂಧಾನ ಮಾಡಬೇಕೆಂಬುವದು ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ (ಶ್ರುತಿಯಲ್ಲಿ 'ಎಲ್ಲಿ' ಹೇಳಲ್ಪಟ್ಟಿರುತ್ತದೆಂದರೆ—" ಸಚಾಚಾರ್ಯವಂಶೋಜ್ಞೇಯಃ । ಆಚಾರ್ಯಾಣಾಮಸಾವಸಾವಿತ್ಯಾಭಗವತ್ತಃ " ಅಂದರೆ ಆಚಾರ್ಯವಂಶವನ್ನು ತಿಳಿಯತಕ್ಕದ್ದು, ಆಚಾರ್ಯರ್‍ಗಳು ಇವರಿವರು ಎಂಬದಾಗಿ ಭಗವಂತನವರಿವಿಗೂ ಅನುಸಂಧಾನ ಮಾಡತಕ್ಕದ್ದು. ಆಚಾರ್ಯಶಬ್ದದಿಂದ ಪುರುಷನಿಗೆ ಅಧ್ಯಾತ್ಮವಿದೆ. ಯ ಉಪದೇಶ, ಪ್ರಪದನ ಮುಂತಾದವುಗಳ ವಿಷಯಗಳಲ್ಲಿ ಯಾರು ಉಪಕಾರಕರೋ ಅವರು ಎಂಬದಾಗಿ ತಿಳಿಯತಕ್ಕದ್ದು. ಆದುದರಿಂದ ಅಧ್ಯಾತ್ಮವಿದ್ಯೆಯ ಉಪದೇಷ್ಟೃಗಳು ಆಚಾರ್ಯವಂಶ ಶಬ್ದದಿಂದ ಹೇಳಲ್ಪಟ್ಟರು. ಪ್ರಹ್ಲಾದನಿಗೆ ಉಂಟಾದ ಹಾಗೆ ಆತನ ಪಿತೃವಾದ ಹಿರಣ್ಯಕಶಿಪುವು ಮೊದಲಾದವರನ್ನು ಕುರಿತು ಹೇಳಿದುದಲ್ಲವು. ಮೇಲೆ ಹೇಳಿದ ರೀತಿಯಲ್ಲಿ ಉಪಕಾರಕಾಚಾರ್ಯರೂ ಪ್ರಾಚಾರ್ಯರೂ ಮೊದಲಾದವರೂ ಮತ್ತೂ ಅಧ್ಯಾತ್ಮವಿದ್ಯಾಪ್ರಾಚುರ್ಯನಿಷ್ಠರಾದ ಮಹಾನುಭಾವರಾದ ನಮ್ಮಾಳ್ವಾರ್ ಮೊದಲಾದ ಆಳ್ವಾರುಗಳೂ ನಾಥಮುನಿ, ಯಾಮುನಮುನಿ, ಶ್ರೀಭಾಷ್ಯಕಾರ ಪ್ರಭೃತಿಗಳು ಮುಖ್ಯವಾಗಿ ಇಲ್ಲಿ ಹೇಳಲ್ಪಟ್ಟರೆಂಬದಾಗಿ ಭಾವಿಸತಕ್ಕದ್ದು.)

(ಹಿಂದಿನ ವಾಕ್ಯದಲ್ಲಿ " ಭಗವಾನಳವುಂ ಶೆಲ್ಲಮನುಸಂಧೇಯಂ" ಎಂದು ಹೇಳಿರುವ ರೀತಿಯಲ್ಲಿ ಆಚಾರ್ಯಪರಂಪರೆಯನ್ನು ಸರ್ವೇಶ್ವರನ ವರಿವಿಗೂ ಅನುಸಂಧಾನಮಾಡತಕ್ಕದ್ದೆಂದು ಹೇಳಲ್ಪಟ್ಟಿರುವದರಿಂದ ಸರ್ವೇಶ್ವರನೂ ಹೇಗೆ ಆಚಾರ್ಯಗೋಷ್ಠಿಯಲ್ಲಿ ಸೇರಿ ಪರಮಾಚಾರ್ಯನೆಂಬದಾಗಿ ಹೇಳಿಸಿಕೊಳ್ಳುತಾನೆಂಬುವದನ್ನು ತಿಳಿಸುತ್ತಾರೆ.

"ತಮಿಮಂ ಸರ್ವಸಂಪನ್ನಮಾಚಾರ್ಯಂ ಪಿತರಂ ಗುರುಂ,[1]" ಎನ್ನುವ
" ಮಮಾಪ್ಯಖಿಲಲೋಕಾನಾಂ ಗುರುರ್ನಾರಾಯಣೋ ಗುರುಃ[2] "

ಆಚಾರ್ಯರೇನೋ ಅಧ್ಯಾತ್ಮವಿದ್ಯಾ ಉಪದೇಷ್ಟೃಗಳಾದ ಪ್ರಯು ಕ್ತ ಅನುಸಂಧೇಯರು. ಸರ್ವೇಶ್ವರನು ಹೇಗೆ ಎಂಬ ಶಂಕೆಯನ್ನು ನಿವಾರಣಮಾಡುತ್ತಾರೆ.)

ತಮಿಮಂ - ಅಂತಹ ಈ, ಸರ್ವಸಂಪನ್ನಂ - ಧರ್ಮರಾಯ ಸಭೆಯಲ್ಲಿ ಅಗ್ರಪೂಜೆಗೆ ಅರ್ಹತೆಯಿರುವ ಹಾಗೆ ಸಕಲ ವಿಧವಿಭವೈಶ್ವ ರ್ಯಾದಿಗಳಿಂದ ಯುಕ್ತನಾದ, ಆಚಾರ್ಯಂ - ಅಧ್ಯಾತ್ಮವಿದ್ಯಾಪ್ರದಾ ತೃವಾದ, ಪಿತರಂ - ಲೋಕಪಿತಾವಾದ, ಗುರುಂ - ವೇದಾಧ್ಯಾಪಕನಾ ದ ಶ್ರೀಕೃಷ್ಣನನ್ನೂ, ಭಾರತದಲ್ಲಿ ಈಶ್ವರನನ್ನು ಪರಮಾಚಾರ್ಯನೆಂ ಬದಾಗಿಯೂ ಪರಮಗುರುವಾಗಿಯೂ ಭೀಷ್ಮಾಚಾರ್ಯರು ಹೇಳಿರುವ ದರಿಂದಲೂ,ನಾರಾಯಣಃ - ಶ್ರೀಮನ್ನಾರಾಯಣನು, ಮಮಾಪಿ - ಭೂ ಮಿಯಾದ ನನಗೂ ಕೂಡ, ಗುರುಃ - ಗುರುವು, ಹಾಗೆಯೇ, ಅಖಿಲಲೋ ಕಾನಾಂ - ಸಮಸ್ತಲೋಕದ ಜನರಿಗೂ ಗುರುವು, ಅಗುರುಃ - ಆ ಶ್ರೀ ಮನ್ನಾರಾಯಣನಿಗೆ ಯಾರೂ ಗುರುವಿಲ್ಲವು (ಆದುದರಿಂದಲೇ ನಮ್ಮ ಸ್ವಂತ ಆಚಾರ್ಯರನ್ನು ಹಿಡಿದು ಲೋಕಗುರುವಾದ ಪರಮಾಚಾರ್ಯನ ವರಿವಿಗೂ ಅನುಸಂಧಾನಮಾಡತಕ್ಕದ್ದೆಂದು ಹೇಳಲ್ಪಟ್ಟಿತು. ಇದು ಕಂಸ, ಶಿಶುಪಾಲ ಮುಂತಾದವರುಗಳಿಂದುಂಟಾದ ಭೂಭಾರಾವತರಣ ಕ್ಕಾಗಿ ಭೂಮಿಯು ಸ್ವಾಮಿಯನ್ನು ಪ್ರಾರ್ಥಿಸುವ ಸಂದರ್ಭವು ಪರಾ

1 ಭಾರತ ಸಭಾ. ೪೧-೨೧, ಭಾರತದಲ್ಲಿ " ತಮಿಮಂ ಪೂಕಸಂಪನ್ನಂ ಆಚಾರ್ಯಂ ಪಿತರಂ ಗುರುಂ । ಅರ್ಘ್ಯಮರ್ಚಿತಮರ್ಚಾರ್ಹಾಃ ಸರ್ವಸಂಕ್ಷಂತುಮ ರ್ಹಥ " ಎಂಬದಾಗಿ ಪಾಠವಿರುತ್ತದೆ. ಆಚಾರ್ಯ, ಗುರು ಎಂಬದಾಗಿ ಉಪ ಯೋಗಿಸಿರುವದರಲ್ಲಿ ಪೌನುರುಕ್ತ್ಯದೋಷವಿಲ್ಲವೆಂಬದಾಗಿ ಮೇಲೆ ತೋರಿಸಿ ದೆತ್ತಿದೆ.

2 ವಿ. ಪು. ೫-೧ ೧೫.

ಎನ್ರುಂ "ತ್ವಮೇವಬಂಧುಶ್ಚಗುರುಸ್ತ್ವಮೇವ[1]" ಮೆನ್ರುಂ "ಗುರುರಸಿಗತಿಶ್ಚಾಸಿ ಜಗತಾಂ[2]" ಎನ್ರುಂ ಶೊಲ್ಲುಗಿರಪಡಿಯೆ ಸರ್ವಲೋಕತ್ತುಕ್ಕುಂ ಪರಮಾಚಾರ್ಯನಾನ ಸರ್ವೇಶ್ವರನ್[3] ಬ್ರಹ್ಮಾವುಕ್ಕು[4] ಅಡಿಯಿಲೆ ವೇದಂಗಳೈ ಕೊಡುತ್ತುಂ ಅವತ್ತೈಕ್ಕರ್ ಅಪಹಾರಂ ಪಿರಂದಪ್ಪೋದು[5] ಮೀಟ್ಟುಕೊಡುತ್ತುಂ ಇವನ್

ಶರರು ವಿಷ್ಣುಪುರಾಣದಲ್ಲಿ ಸರ್ವೇಶ್ವರನು ಲೋಕಕ್ಕೆಲ್ಲಾ ಗುರುವಾಗಿ ಆತನಿಗೆ ಯಾರೂ ಗುರುವಿಲ್ಲವೆಂಬದಾಗಿ ಹೇಳಿರುವದರಿಂದಲೂ, "ನೀನೇ ಸರ್ವಬಂಧುವು ನೀನೇ ಗುರುವು" ಎಂಬದಾಗಿ ಶರಣಾಗತಿಗದ್ಯದಲ್ಲಿ ಹೇಳಿರುವದರಿಂದಲೂ, ಅಜ್ಞಾನಾಂಧಕಾರವನ್ನು ಹೋಗಲಾಡಿಸಿ ತತ್ವಹಿತಪುರುಷಾರ್ಥಗಳನ್ನುಪದೇಶಿಸುವವನು ಮತ್ತು ಜಗತ್ತಿನ ಸರ್ವಜೀವರುಗಳಿಗೂ ಉಪಾಯೋಪೇಯನಾಗಿರುವ ಗತಿಯೂ ನೀನೆ" ಎಂಬದಾಗಿ ಶ್ರೀಯಾಮುನಾಚಾರ್ಯರವರು ಹೇಳಿರುವದರಿಂದಲೂ ಸರ್ವಲೋಕದ ಜೀವರುಗಳಿಗೂ ಸರ್ವೇಶ್ವರನು ಪರಮಾಚಾರ್ಯನು. (ಪರಮಾಚಾರ್ಯನೆಂಬುವದಕ್ಕೆ ಶ್ರುತಿ, ಸ್ಮೃತಿ, ಮಹರ್ಷಿ, ಮುನಿವಾಕ್ಯ ಪ್ರಮಾಣಗಳನ್ನುದಹರಿಸಿ, ಸರ್ವೇಶ್ವರನು ಹೇಗೆ ಪರಮಾಚಾರ್ಯನೆಂಬುವ

1 ಶರಣಾಗತಿಗದ್ಯಂ —" ತ್ವಮೇವ ಮಾತಾಚ ಪಿತಾತ್ವಮೇವ ತ್ವಮೇವ ಬಂಧುಶ್ಚ ಗುರುಸ್ತ್ವಮೇವ । ತ್ವಮೇವವಿದ್ಯಾದ್ರವಿಣಂ ತ್ವಮೇವ ತ್ವಮೇವ ಸರ್ವಂ ಮಮ ದೇವದೇವ ॥" ಎಂಬುದು ಪೂರಾ ಶ್ಲೋಕವು.

2 ಆಳವಂದಾರ್ ಸ್ತೋತ್ರಂ ೬೦. " ಪಿತಾತ್ವಂ ಮಾತಾತ್ವಂ ದಯಿತತನಯಸ್ತ್ವಂ ಪ್ರಿಯಸುಹೃತ್ತ್ವಮೇವತ್ವಂ ಮಿತ್ರಂ ಗುರುರಸಿಗತಿಶ್ಚಾಸಿಜಗತಾಂ" ಎಂಬುದು ಪೂರ್ವಾರ್ಥವು.

3 ಬ್ರಹ್ಮಾ-ಎಂದು ದೀರ್ಘವಿದ್ದರೆ ಚತುರ್ಮುಖಬ್ರಹ್ಮನು, ಹ್ರಸ್ವವಿದ್ದರೆ ಪರಬ್ರಹ್ಮವು. 4 ಅಡಿಯಿಲೆ - ಆದಿಯಲ್ಲಿ

5 ಮೀಟ್ಟು - ಪುನಃ

**ಮುಖಮಾಕ ಶಾಸ್ತ್ರಂಗಳೈ ಪ್ರವರ್ತಿಪ್ಪಿತ್ತುಂ, ಇವರ್ಪುತ್ರರ್ಗಳಾನಸನತ್ಕುಮಾರಾದಿಗಳೈ "ಸ್ವಯಮಾಗತ ವಿಜ್ಞಾನಾ ನಿವೃತ್ತಿಂ ಧರ್ಮಮಾಸ್ಥಿತಾಃ" ಎನ್ರುಂ ಪಡಿಪಣ್ಣಿ, ಅವರ್ಗಳ್ ಮುಖಂಗಳಾಲೇ ಹಿತಪ್ರವರ್ತನಂ ಪಣ್ಣುವಿತ್ತುಂ, ಇಪ್ಪಡಿಯೇ ಮತ್ತುಂ ನಾರದ ಪರಾಶರ ಶುಕ ಶೌನಕಾದಿಗಳಾನ ಪಲಮುಹರ್ಷಿಗಳೈಯಿಟ್ಟು ಅಧ್ಯಾತ್ಮಸಂಪ್ರದಾಯಂ ಕುಲೈಯಾದಪಡಿನಡತ್ತಿಯುಂ,**

---

ದನ್ನು ಮುಂದಕ್ಕೆ ಸಮರ್ಥನೆ ಮಾಡಿರುತ್ತಾರೆ. ಸರ್ವೇಶ್ವರನು ಹೇಗೆ ಆಚಾರ್ಯನೆಂಬುವದನ್ನು ಎಂಟು ಕಾರಣಗಳಿಂದ ಸಮರ್ಥನ ಮಾಡುತ್ತಾರೆ.

1. ಈ ಸರ್ವೇಶ್ವರನು ತನ್ನ ಪುತ್ರನಾದ ಚತುರ್ಮುಖಬ್ರಹ್ಮನಿಗೆ ಆದಿಯಲ್ಲಿ ವೇದಗಳನ್ನು ಕೊಟ್ಟು ಅಂದರೆ ತಾನೇ ಸ್ವತಃ ಉಪದೇಶಮಾಡಿ, ಆ ವೇದಗಳು ಮಧುಕೈಟಭಾದಿ ರಾಕ್ಷಸರುಗಳಿಂದ ಅಪಹರಿಸಲ್ಪಟ್ಟಾಗ ಪುನಃ ಅವುಗಳನ್ನು ತಂದುಕೊಟ್ಟನು.

2 ಈ ಚತುರ್ಮುಖನ ಮೂಲಕವಾಗಿ ಶಾಸ್ತ್ರಗಳನ್ನು ಪ್ರಚುರಗೊಳಿಸಿ, ಈ ಚತುರ್ಮುಖನು ತನ್ನ ಏಳು ಮಕ್ಕಳಾದ ಸನತ್ಕುಮಾರ ಮೊದಲಾದವರುಗಳನ್ನು ಮಹಾವಿಕಾಸವಾದ ಧರ್ಮಭೂತಜ್ಞಾನ ಹೊಂ

---

1 ಭಾರತ ಶಾಂತಿ. ೩೪೯, ೭೧. 2 "ಸನತ್ಕುಮಾರಾದಿಗಳೈ" ಎಂಬಲ್ಲಿರುವ ಆದಿ ಪದದಿಂದ ಚತುರ್ಮುಖಬ್ರಹ್ಮನ ಏಳು ಮಕ್ಕಳು ಹೇಳಲ್ಪಟ್ಟರು ಅವರು ಯಾರೆಂದರೆ—"ಸನಃ ಸನತ್ಸುಜಾತಶ್ಚ ಸನಕಃ ಸಸನಂದನಃ । ಸನತ್ಕುಮಾರಃ ಕಪಿಲಃ ಸಪ್ತಮಶ್ಚ ಸನಾತನಃ । ಸಪ್ತೈತೇ ಮಾನಸಾಃ ಪ್ರೋಕ್ತಾ ಋಷಯೋ ಬ್ರಹ್ಮಣಸ್ಸುತಾಃ । ಸ್ವಯಮಾಗತವಿಜ್ಞಾನಾ ನಿವೃತ್ತಿಂ ಧರ್ಮಮಾಸ್ಥಿತಾಃ" ಎಂಬ ಶ್ಲೋಕಗಳಲ್ಲಿ ಚತುರ್ಮುಖನ ಮಾನಸಪುತ್ರರು—(1) ಸನ, (2) ಸನತ್ಸುಜಾತ, (3) ಸನಕ, (4) ಸಸನಂದನ, (5) ಸನತ್ಕುಮಾರ, (6) ಕಪಿಲ, (7) ಸನಾತನ ಎಂಬದಾಗಿ ಏಳು ಮಂದಿಗಳು.

**"ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಂ ।
ಕೋಹ್ಯನ್ಯೋ ಭುವಿ ಮೈತ್ರೇಯ ಮಹಾಭಾರತಕೃದ್ಭವೇತ್¹"**

ದಿದವರಾದ ಪ್ರಯುಕ್ತ ಮಹಾಜ್ಞಾನಿಗಳೆಂದೆನಿಸಿದವರನ್ನೂ ನಿವೃತ್ತಿಮಾರ್ಗವೆಂದರೆ ವಿರಕ್ತಿಮಾರ್ಗದಲ್ಲಿರುವವರ ಹಾಗೆ ಮಾಡಿ, ಆ ಏಳು ಪುತ್ರರಮೂಲಕ ತತ್ವಹಿತಪುರುಷಾರ್ಥಗಳ ಪ್ರವರ್ತನೆಯನ್ನುಂಟುಮಾಡಿಸಿದನು.

3. ಹೀಗೆಯೇ ಇನ್ನೂ ನಾರದ, ಪರಾಶರ, ಶುಕ, ಶೌನಕ ಮೊದಲಾದ ಮಹರ್ಷಿಗಳ ಮೂಲಕ ಅಧ್ಯಾತ್ಮಸಿದ್ಧಾಂತದ ಕ್ರಮವು ನಾಶವಾಗದ ಹಾಗೆ ನಡಿಸಿಕೊಟ್ಟು ಹೀಗೆ ಕೃಪೆಗೈದಿರುತ್ತಾನೆ (ಮೂಲದಕ್ಕೆ "ಅರುಳಿನಾರ್" ಎಂಬದಾಗಿದೆ. ಅದೇ ಕ್ರಿಯಾಪದವು) (ವಾಕ್ಯವು ತುಂಬಾ ದೊಡ್ಡದಾಗುವದರಿಂದ ಅಭಿಪ್ರಾಯ ಗ್ರಹಣವು ಕಷ್ಟವಾದೀತೆಂದು ಭಾವಿಸಿ ಭಾಷಾಂತರದಲ್ಲಿ ಚಿಕ್ಕವಾಕ್ಯಗಳಾಗಿ ವಿಭಾಗಿಸಲ್ಪಟ್ಟಿರುತ್ತದೆ.)

4. ಕೃಷ್ಣದ್ವೈಪಾಯನಂ ವ್ಯಾಸಂ - ಕೃಷ್ಣದ್ವೈಪಾಯನನೆಂಬ ಇನ್ನೊಂದು ಹೆಸರುಳ್ಳ ವ್ಯಾಸಮಹರ್ಷಿಯನ್ನು, ನಾರಾಯಣಂ ಪ್ರಭುಂ - ಸ್ವಾಮಿಯಾದ ಶ್ರೀಮನ್ನಾರಾಯಣಾಂಶವನ್ನಾಗಿ, ವಿದ್ಧಿ - ತಿಳಿ. ಏತಕ್ಕೆಂದರೆ—ಮೈತ್ರೇಯ - ಓ ಮೈತ್ರೇಯನೇ, ಭುವಿ - ಈ ಲೋಕದಲ್ಲಿ, ಕೋಹ್ಯನ್ಯಃ - ಇನ್ನು ಬೇರೆ ಯಾರುತಾನೆ, ಮಹಾಭಾರತಕೃತ್ - ಪಂಚಮವೇದವೆನಿಸುವ ಸರ್ವಶ್ರೇಷ್ಠರಾದ, ಸರ್ವಧರ್ಮಗಳನ್ನು ಬೋಧಿಸುವ ಮಹಾಭಾರತಗ್ರಂಥಕರ್ತರು, ಭವೇತ್ - ಆದಾರು ? ಎಂಬದಾಗಿ ಅವರ ತಂದೆಯಾದ ಪರಾಶರರೇ ಹೇಳಿರುವದರಿಂದಲೂ, ತಸ್ಯಮಹರ್ಷೇಃ ಕೀರ್ತನಾತ್ - ಆ ಮಹರ್ಷಿಗಳಾದ

1 ವಿ. ಪು. ೩, ೪, ೫. ಇಲ್ಲಿ "ಕೋಹ್ಯನ್ಯೋ" ಎಂಬುವದಕ್ಕೆ ಬದಲಾಗಿ "ಕೋನ್ಯೋಹಿ" ಎಂಬದಾಗಿ ಇರುತ್ತದೆ. "ಹಿ, ಅನ್ಯಃ" ಎಂಬ ಪದಗಳು ಹಿಂದುಮುಂದಾಗಿವೆ. ಅರ್ಥಭೇದವಿಲ್ಲವು.

ಎನ್ರುಂ " ಮಹರ್ಷೇಃ ಕೀರ್ತನಾತ್ತಸ್ಯ ಭೀಷ್ಮಃ ಪ್ರಾಂಜಲಿರಬ್ರವೀತ್[1]" ಎನ್ರುಂ ಶೊಲ್ಲುಕಿರಪಡಿ ನಿರ್ಕರ ವ್ಯಾಸಾದಿಗಳೈಯುನುಪ್ರವೇಶಿತ್ತು ಮಹಾಭಾರತ ಶಾರೀರಕಾದಿಗಳೈ ಪ್ರವರ್ತಿಪ್ಪಿತ್ತುಂ[2], ಹಂಸಮತ್ಸ್ಯಹಯಗ್ರೀವ ನರನಾರಾಯಣ ಗೀತಾ

---

ವ್ಯಾಸರನ್ನು ಹೊಗಳುವದರಿಂದ, ಭೀಷ್ಮಃ - ಭೀಷ್ಮಾಚಾರ್ಯರು, ಪ್ರಾಂಜಲಿಃ - ಅಂಜಲಿಬದ್ಧರಾಗಿ, ಅಬ್ರವೀತ್ - ಹೇಳಿದರು ಎಂಬದಾಗಿ ಹೇಳಿರುವ ಮೇರಿಗೆ ಮಹಾಖ್ಯಾತಿಯನ್ನು ಹೊಂದಿರುವ ವ್ಯಾಸಮಹರ್ಷಿ ಮೊದಲಾದವರುಗಳನ್ನನುಪ್ರವೇಶಮಾಡಿ ಮಹಾಭಾರತವೆಂಬ ಇತಿಹಾಸ, ಉತ್ತರಮೀಮಾಂಸೆ ಎಂಬ ಬ್ರಹ್ಮಸೂತ್ರಗಳು ಮೊದಲಾದವುಗಳನ್ನು ಪ್ರಚುರಗೊಳಿಸಿ ದಯಪಾಲಿಸಿರುತ್ತಾನೆ.

5. ಇದೂ ಅಲ್ಲದೆ ಸರ್ವೇಶ್ವರನು ತಾನೇ ಹಂಸ, ಮತ್ಸ್ಯ, ಹಯಗ್ರೀವ, ನರನಾರಾಯಣ, ಗೀತಾಚಾರ್ಯನಾದ ಶ್ರೀಕೃಷ್ಣ ಮೊದಲಾದ ಅವತಾರಗಳ ಮೂಲಕವಾಗಿ ತಾನೇ ಪ್ರಚುರಗೊಳಿಸಬೇಕೆಂದು ಮುಂದೆ ನಿಂತು ಯಾವುದು ತತ್ವವು, ಯಾವುದು ಹಿತವಾದುದು,

---

1 ಭಾರತ ಆದಿ. ೧೦೪; ೧೧. ಇಲ್ಲಿ " ಪ್ರಾಂಜಲಿಃ " ಅಂಜಲಿಬದ್ಧರಾಗಿ ಎಂಬದಾಗಿ ಹೇಳಿರುವದರಿಂದ ಮಹಾಬ್ರಹ್ಮವಿತ್ತಾಗಿ ಭಾಗವತೋತ್ತಮರೆನಿಸಿರುವ ವ್ಯಾಸಮಹರ್ಷಿಯ ಸಂಕೀರ್ತನವು ನಡೆದುದರಿಂದ ಮಹಾಜ್ಞಾನಿಯಾದ ಭೀಷ್ಮರು ಅಂಜಲಿಯನ್ನು ಮಾಡಿದರು ಎಂದು ಭಾವಿಸತಕ್ಕದ್ದು. ಹೀಗೆ ಮಹಾಭಾಗವತೋತ್ತಮರ ವಿಷಯಿಕವಾದ ಸಂಭಾಷಣೆಯು ನಡೆಯುವಾಗ ನಾವುಗಳು ಸಹ ಹಾಗೆಯೇ ಅಂಜಲಿಬದ್ಧರಾಗಿರಬೇಕೆಂಬುವದು ಇದರಿಂದ ವ್ಯಕ್ತಪಡುತ್ತದೆ. ಆಚಾರ್ಯನಾಮಸಂಕೀರ್ತನವು ನಡಿಯುವಾಗಲೂ ಅಂಜಲಿಯನ್ನು ಮಾಡತಕ್ಕದ್ದು ವಿಧಾಯಿಕವೆಂಬುದೂ ಇದರಿಂದ ಸೂಚಿಸಲ್ಪಟ್ಟಿತು.

2 ಶಾರೀರಕಶಾಸ್ತ್ರವೆಂದರೆ ಉತ್ತರಮೀಮಾಂಸೆ, ವೇದಾಂತಶಾಸ್ತ್ರವು, ವೇದಾಂತಗಳಲ್ಲಿ ಸರ್ವವೂ ಸ್ವಾಮಿಗೆ ಶರೀರವೆಂಬದಾಗಿ ಹೇಳುವದರಿಂದ ವೇದಾಂತಶಾಸ್ತ್ರಕ್ಕೆ ಶಾರೀರಕಶಾಸ್ತ್ರವೆಂದು ಹೆಸರು.

**ಚಾರ್ಯಾದ್ಯವತಾರಂಗಳಾಲೇ ತಾನೇವೆಳಿನಿನ್ರು[1] ತತ್ವ ಹಿತಪುರುಷಾರ್ಥಂಗಳೈ ಪ್ರಕಾಶಿಪ್ಪಿತ್ತುಂ, ತಾನರುಳಿಚ್ಚೆಯ್ದ ವರ್ಥಂಗಳೈಯೆಲ್ಲಾಂ ಶ್ರೀಭೀಷ್ಮರ್ ಮುದಲಾನ ಜ್ಞಾನಾಧಿಕರೈಯಿಟ್ಟು ಮುದಲಿಪ್ಪಿತ್ತುಂ[2],**

ಯಾವುದು ಪರಮಪುರುಷಾರ್ಥವು ಎಂಬುವುಗಳನ್ನು ಪ್ರಕಾಶಗೊಳಿಸಿದುದೂ ಅಲ್ಲದೆ, ತಾನುಪದೇಶಿಸಿದ ಸದಭಿಪ್ರಾಯಗಳೆಲ್ಲಾ ಪರಮಾರ್ಥವಾಗಿ ಶಿಷ್ಟಗ್ರಾಹ್ಯವೆಂಬುವದನ್ನು ಪ್ರಕಟನೆಮಾಡುವದಕ್ಕಾಗಿ ಗಂಗಾಪುತ್ರರಾದ ಶ್ರೀಭೀಷ್ಮರೇ ಮೊದಲಾದ ಮಹಾಜ್ಞಾನಿಗಳ ಮೂಲಕವಾಗಿ ಜಿಜ್ಞಾಸಮಾಡಿಸಿ ಸ್ಥಿರೀಕರಿಸಿ ಶರತಲ್ಪದಲ್ಲಿರುವಾಗ ಅವುಗಳನ್ನೇ ಯುಧಿಷ್ಠಿರಪ್ರಭೃತಿಗಳಿಗೆ ಉಪದೇಶಿಸುವ ಹಾಗೆ ಕೃಪೆಗೈದಿರುತ್ತಾನೆ.

(ಹಂಸಾವತಾರ ಕಥೆ—ಸನಕಾದಿಗಳಾದ ಚತುರ್ಮುಖನ ಪುತ್ರರುಗಳು ತಮ್ಮ ಪಿತಾವನ್ನು ಕುರಿತು ಶಬ್ದಾದಿ ಗುಣಗಳು ಜೀವನ ಮನಸ್ಸಿನಲ್ಲೂ, ಮನಸ್ಸು ಶಬ್ದಾದಿಗಳಲ್ಲೂ ಹೀಗೆ ಪರಸ್ಪರ ಆಶ್ರಯವಿರುವಲ್ಲಿ ಮೋಕ್ಷಾರ್ಥಿಯಾದ ಚೇತನನಿಗೆ ಅವುಗಳ ಪರಸ್ಪರ ವಿಯೋಗ ಉಂಟಾಗಬೇಕಲ್ಲಾ, ಅದು ಹೇಗೆ ಎಂಬದಾಗಿ ಪ್ರಶ್ನಿಸಲು, ಅದಕ್ಕೆ ಚತುರ್ಮುಖನಿಗೆ ಉತ್ತರ ಹೇಳಲು ತೋಚದಿರಲು, ಆಗ ಸ್ವಾಮಿಯು ಹಂಸಾವತಾರಿಯಾಗಿ ಎದುರಿಗೆ ಬಂದು ನಿಲ್ಲಲು ಆಗ ಚತುರ್ಮುಖ ಸನಕಾದಿಗಳು ಸ್ವಾಮಿಯನ್ನು ಕುರಿತು ನೀನು ಯಾರೆಂಬದಾಗಿ ಪ್ರಶ್ನಿಸಲು ಅದಕ್ಕೆ ಹಂಸರೂಪಿಯಾದ ಭಗವಂತನು ಧರ್ಮವನ್ನು ಬೋಧಿಸಿ ಅವರು ಕೇಳಿದ ಪ್ರಶ್ನೆಯು ಹೇಗೆ ನಿರರ್ಥಕವಾದುದೆಂಬದಾಗಿ ತಿಳಿಸಿ ಸನಕಾದಿಗಳಿಗಿದ್ದ ಸಂಶಯವನ್ನು ಹೋಗಲಾಡಿಸಿ ಜ್ಞಾನವನ್ನೀಯುವನು. ಈ ಕಥೆಯು ಭಾಗವತ ಏಕಾದಶಸ್ಕಂಧದಲ್ಲಿ ತಾವು ಹೀಗೆ

1 ತಾನೇ ವೆಳಿನಿನ್ರು—ತಾನೇ ಮುಂದಾಗಿ ನಿಂತು.

2 ಮುದಲಿಪ್ಪಿತ್ತುಂ—ಜಿಜ್ಞಾಸಮಾಡಿ ಸಾಧುವೆಂದು ಹೇಳಿಸಿ.

ಉಪದೇಶಮಾಡಿದುದಾಗಿ ಶ್ರೀಕೃಷ್ಣನು ಉದ್ಧವರಿಗೆ ತಿಳಿಸುತ್ತಾನೆ. ಸೂಕ್ಷ್ಮವಾಗಿ ಅವತಾರ ಪ್ರಯೋಜನಗಳನ್ನು ಶ್ರೀ ಶುಕಮಹರ್ಷಿಯು ಹೇಳುವಾಗ " ಹಂಸಸ್ವರೂಪ್ಯವದದಚ್ಯುತ ಆತ್ಮಯೋಗಂ " ಎಂಬದಾಗಿರುತ್ತದೆ.

ಮತ್ಸ್ಯಾವತಾರ ಕಥೆ—ಚತುರ್ಮುಖಬ್ರಹ್ಮನು ಕಲ್ಪಾಂತದಲ್ಲಿ ನಿದ್ರೆಯಲ್ಲಿರುವಾಗ ಹಯಗ್ರೀವಾಖ್ಯ ಅಸುರನು ವೇದಗಳನ್ನು ಅಪಹರಿಸಲು, ಆಗ ಸರ್ವೇಶ್ವರನು ಮತ್ಸ್ಯರೂಪವನ್ನು ಧರಿಸಿ ರಾಜರ್ಷಿಯಾದ ಸತ್ಯವ್ರತನೆಂಬ ಮನುವು ಕೊಡುತ್ತಿದ್ದ ಜಲತರ್ಪಣಕಾಲದಲ್ಲಿ ಸಣ್ಣ ಮೀನಾಗಿ ಆತನ ಕೈಗೆ ಸಿಕ್ಕಿ ಯಾವ ಯಾವ ಜಲಾಶಯಗಳಲ್ಲಿ ಬಿಟ್ಟರೂ ಬೆಳೆದು, ಕಡೆಗೆ ಸಮುದ್ರದಲ್ಲಿ ಬಿಡಲೆತ್ನಿಸಲು, ಆಗ ಮತ್ಸ್ಯವು ಆ ಮನುವನ್ನು ಸಮುದ್ರದಲ್ಲಿ ಜಲಚರಗಳ ಹಾವಳಿಯಾದುದರಿಂದ ಬಿಡಬೇಡವೆಂದು ಪ್ರಾರ್ಥಿಸಲು, ಆಗ ಸತ್ಯವ್ರತನು ಇಂತಹ ಹೀಗೆ ಅದ್ಭುತಾಕಾರದಿಂದ ವೃದ್ಧಿಯಾಗುವ ಮಾಹಾತ್ಮ್ಯಯುಳ್ಳವನು ವೇದಾಂತವೇದ್ಯನಾಗಿ, ನಿಖಿಲಜಗದುದಯವಿಭವಲಯಲೀಲನಾಗಿ ಸಾಧುಪರಿತ್ರಾಣಾರ್ಥವಾಗಿಯೂ ದುಷ್ಟನಿಗ್ರಹಾರ್ಥವಾಗಿಯೂ ಶಾಸ್ತ್ರೋಪದೇಶಾರ್ಥವಾಗಿಯೂ ಪದೇಪದೇ ಅವತರಿಸುವ ಸಿದ್ಧೋಪಾಯನಾದ ಪರಮಪುರುಷನೆಂದು ಭಾವಿಸಿ ಆತನನ್ನು ಸ್ತೋತ್ರಮಾಡಿ ನಮಸ್ಕರಿಸುವಾಗ, ಮತ್ಸ್ಯರೂಪಿಯಾದ ಭಗವಂತನು ಹೇಳುತ್ತಾನೆ. ಓ ಸತ್ಯವ್ರತನೇ " ಇಂದಿಗೆ ಏಳನೇ ದಿನದಲ್ಲಿ ಪ್ರಳಯವುಂಟಾಗುವದು, ನನ್ನ ಸಂಕಲ್ಪದಿಂದುಂಟಾದ ಒಂದು ನಾವೆಯು ಉತ್ಪನ್ನವಾಗುವದು, ನೀನು ಅವುಗಳಲ್ಲಿ ಸರ್ವಭೂತಗಳನ್ನೂ ಸರ್ವ ವನಸ್ಪತಿ, ಬೀಜಗಳೆಲ್ಲವನ್ನೂ ಇಟ್ಟುಕೊಂಡು ಸಪ್ತರ್ಷಿಗಳೊಂದಿಗೆ ಆ ನಾವೆಯನ್ನಾರೋಹಣ ಮಾಡು. ಆ ಮಹಾಪ್ರಳಯದ ಕತ್ತಲು ಮತ್ತು ಬಿರುಗಾಳಿಯು ಹೊಡತದಲ್ಲೂ ಆ ನಾವೆಗೆ ಏನೂ ತೊಂದರೆಯಾಗದೆ ಚತುರ್ಮುಖಬ್ರಹ್ಮನು ಮಲಗಿರುವತನಕ ಅದು ರಕ್ಷಿಸಲ್ಪಡುತ್ತದೆ. ಅನಂತರ ನಾನು ಆ ಸಮುದ್ರದಲ್ಲಿ ಮತ್ಸ್ಯರೂಪದಲ್ಲಿರುವೆನು. ನನ್ನ ಶೃಂಗಕ್ಕೆ ವಾಸುಕಿಯನ್ನೇ ಹಗ್ಗವಾಗಿ ಮಾಡಿ ಆ ನಾವೆಯನ್ನು ಬಂಧಿಸು" ಎಂದು ಆಜ್ಞಾಪಿಸಿ ಶ್ರೀಮಹಾವಿಷ್ಣುವು

**“ ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಸ್ಸ್ವಯಂ।”**
**ಎಂಗಿರಪಡಿಯೇ ಅಡಿಯಿಲೆ ತಾನರುಳಿಚ್ಚೆಯ್ದ ಭಗವಚ್ಛಾಸ್ತ್ರತ್ತೈ**

ಅಂತರ್ಧಾನವನ್ನೈದಲು, ಅನಂತರ ಸತ್ಯವ್ರತನು ಪರಮೇಶ್ವರನ ಚರಣಾರವಿಂದವನ್ನು ಧ್ಯಾನಿಸುತ್ತಾ ಆ ಕಾಲ ನಿರೀಕ್ಷಣೆಯುಳ್ಳಿರಲು, ಆಗ ಮಹಾಬಿರುಗಾಳಿಯಿಂದಲೂ ಪ್ರಳಯಕಾಲದ ಮೇಘಗಳ ವರ್ಷ ದಿಂದಲೂ ಗಾಢಾಂಧಕಾರದಿಂದಲೂ ಕೂಡಿ ಸಮುದ್ರವು ಉಕ್ಕಿ ಭೂಮಿ ಯನ್ನೆಲ್ಲಾ ಆವರಿಸಲು, ಅದರಲ್ಲಿ ಮಹಾವಿಷ್ಣುವು ಅಗಾಧವಾದ ಮತ್ಸ್ಯ ರೂಪವನ್ನು ಧರಿಸಿ ತೇಲಾಡುತ್ತಿರಲು, ಆ ಮತ್ಸ್ಯಶೃಂಗಕ್ಕೆ ಈ ನಾವೆಯನ್ನು ವಾಸುಕಿಯನ್ನೇ ಹಗ್ಗವಾಗಿ ಮಾಡಿ ಸತ್ಯವ್ರತನು ಭಗ ವಂತನ ಆಜ್ಞಾಪ್ರಕಾರ ಬಂಧಿಸಿ, ಆ ಮಹಾನುಭಾವನನ್ನು ಬಹುವಿಧವಾಗಿ ಸ್ತೋತ್ರಮಾಡಿ, ಮೂರು ವಿಧವಾದ ಅಜ್ಞಾನಗಳು ತೊಲಗಿ ಬ್ರಹ್ಮಯಾ ಥಾತ್ಮ್ಯಜ್ಞಾನ ಉಂಟಾಗುವ ಹಾಗೂ, ಕರ್ಮಗಳು ತನ್ನನ್ನು ಪುನಃ ಬಿಗಿದು, ಸಂಸೃತಿಯಲ್ಲೇ ಬಿದ್ದು ನರಳದಹಾಗೆ ಉಪದೇಶಿಸುವಹಾಗೂ ತುಂಬಾ ದೈನ್ಯದಿಂದ ಪ್ರಾರ್ಥಿಸಲಾಗಿ, ಆಗ ಕೃಪಾಪರಿಪೂರ್ಣನಾದ ಭಗವಂತನು ಸಪ್ತರ್ಷಿಗಳಿಗೂ ಸತ್ಯವ್ರತನಿಗೂ ಆಗಮಿಕ ಸರ್ವಶಾಸ್ತ್ರಾ ರ್ಥಗಳ ಉಪದೇಶವನ್ನು ಮಾಡಿ, ಆಮೇಲೆ ಪ್ರಳಯವು ಕಳದನಂತರ ಹುಟ್ಟಿದ ಚತುರ್ಮುಖಬ್ರಹ್ಮನಿಗೆ ಹಯಗ್ರೀವನೆಂಬ ಅಸುರನಂ ಸಂಹ ರಿಸಿ ತಂದು ವೇದಗಳನ್ನು ಕೊಟ್ಟು ಉಪದೇಶಿಸಿದನು. ಸ್ವಾಮಿ ಉಪ ದೇಶದಿಂದ ಹೊಂದಿದ ಜ್ಞಾನವಿಜ್ಞಾನಗಳುಳ್ಳ ಸತ್ಯವ್ರತನೇ, ಈ ಕಲ್ಪದಲ್ಲಿ ಸ್ವಾಮಿಯ ಅನುಗ್ರಹದಿಂದ ವೈವಸ್ವತಮನುವಾದನು. ಇದೀಗ ಮಾ ಯಾವಿಯಾದ ಮಹಾವಿಷ್ಣುವಿನ ಮತ್ಸ್ಯಾವತಾರ ವಿಚಿತ್ರಚೇಷ್ಟಾ ಕಥನವು.

1 ಭಾರತ ಶಾಂ. ೩೪೯, ೬೮. ಅಲ್ಲಿ “ ಪಾಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾತು ಭಗವಾನ್ಸ್ವಯಂ ಸರ್ವೇಷುಚ ನೃಪಶ್ರೇಷ್ಠ ಜ್ಞಾನೇಷ್ವೇತೇಷು ದೃಶ್ಯತೇ ” ಎಂಬದಾಗಿರುತ್ತದೆ.

" ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಶ್ಶೂದ್ರೈಶ್ಚ ಕೃತಲಕ್ಷಣೈಃ[1] । ಅರ್ಚನೀಯಶ್ಚ ಸೇವ್ಯಶ್ಚ ನಿತ್ಯಯುಕ್ತೈಸ್ಸ್ವಕರ್ಮಸು । ಸಾತ್ವತಂ ವಿಧಿಮಾಸ್ಥಾಯ ಗೀತಸ್ಸಂಕರ್ಷಣೇನ ಯಃ । ದ್ವಾಪರಸ್ಯ ಯುಗಸ್ಯಾಂತೇ ಆದೌ ಕಲಿಯುಗಸ್ಯಚ " ಎಂಗಿರಪಡಿಯೇ ಅವಸರಂಗಳಿಲೆ ಆವಿಷ್ಕರಿತ್ತುಂ,

6. ಕೃತ್ಸ್ನಸ್ಯ - ಸಮಸ್ತವಾದ, ಪಂಚರಾತ್ರಸ್ಯ - ಪಾಂಚರಾತ್ರಶಾಸ್ತ್ರಕ್ಕೆ ನಾರಾಯಣಃ - ಶ್ರೀಮನ್ನಾರಾಯಣನು, ಸ್ವಯಂ - ತಾನೇ, ವಕ್ತಾ - ಹೇಳುವವನು, ಅಂದರೆ " ಪಾಂಚರಾತ್ರಶಾಸ್ತ್ರವೆಲ್ಲಾ ಸ್ವಾಮಿನಾರಾಯಣನ ಸ್ವೋಕ್ತಿಯು " ಎಂಬದಾಗಿ ಹೇಳಿರುವ ಮೇರಿಗೆ ಹೀಗೆ ತಾನು ಪ್ರಥಮತಃ ಹೇಳಿದ ಭಗವಚ್ಛಾಸ್ತ್ರವನ್ನು " ಸ್ವಾಚಾರ್ಯರುಗಳಿಂದ ಶಂಖಚಕ್ರಾಂಕಿತವಾದ ಲಕ್ಷಣಗಳನ್ನು ಹೊಂದಿ ಸ್ವಾಮಿಗೆ ದಾಸಭೂತರೆಂಬುವದನ್ನು ತೋರಿಸುತ್ತಿರುವ ಮತ್ತು ತಮ್ಮ

1 ಭಾರತ ಭೀಷ್ಮ. ೬೬, ೪೯, ೪೦. ಅಲ್ಲಿ " ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚ ಕೃತಲಕ್ಷಣೈಃ । ಸೇವ್ಯತೇಽಭ್ಯರ್ಚ್ಯತೇಚೈವ ನಿತ್ಯಯುಕ್ತೈಸ್ಸ್ವಕರ್ಮಭಿಃ । ದ್ವಾಪರಸ್ಯಯುಗಸ್ಯಾಂತೇ ಆದೌ ಕಲಿಯುಗಸ್ಯಚ । ಸಾತ್ವತಂ ವಿಧಿಮಾಸ್ಥಾಯ ಗೀತಸ್ಸಂಕರ್ಷಣೇನವೈ " ಎಂಬದಾಗಿರುತ್ತದೆ. ಕೃತಲಕ್ಷಣೈಃ - ಶಂಖಚಕ್ರಾಂಕಿತರಾದ, ಸ್ವಕರ್ಮಸು - ತಮ್ಮ ತಮ್ಮ ವರ್ಣಾಶ್ರಮಧರ್ಮಗಳಲ್ಲಿ, ನಿತ್ಯಯುಕ್ತೈಃ - ಸದಾನಿರತರಾದ, ಬ್ರಾಹ್ಮಣೈಃಕ್ಷತ್ರಿಯೈರ್ವೈಶ್ಯೈಶ್ಶೂದ್ರೈಶ್ಚ - ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಂದಲೂ ಕೂಡ, ಯಃ - ಯಾವಸರ್ವೇಶ್ವರನು, ಅರ್ಚನೀಯಶ್ಚ . ಪೂಜಿಸಲು ಯೋಗ್ಯನಾಗಿಯೂ, ಸೇವ್ಯಶ್ಚ - ಸೇವಿಸಲು ಯೋಗ್ಯನಾಗಿಯೂ, ದ್ವಾಪರಸ್ಯಯುಗಸ್ಯಾಂತೇ - ದ್ವಾಪರಯುಗಾಂತ್ಯದಲ್ಲೂ, ಆದೌ ಕಲಿಯುಗಸ್ಯಚ - ಕಲಿಯುಗದ ಆದಿಯಲ್ಲಿಯೂ, ಸಂಕರ್ಷಣೇನ - ಸಂಕರ್ಷಣನಿಂದ, ಸಾತ್ವತಂವಿಧಿಂ - ತಿರುನಾರಣೀಯದಲ್ಲಿ ಉಪರಿಚರೋಪಾಖ್ಯಾನದಲ್ಲಿ ಹೇಳಿರುವ ಸಾತ್ವತಶಾಸ್ತ್ರವನ್ನು, ಅಸ್ಥಾಯ - ಅಂಗೀಕರಿಸಿ, ಗೀತಃ - ಹೇಳಲ್ಪಟ್ಟನೋ.

" ಪೂರ್ವೋತ್ಪನ್ನೇಷು ಭೂತೇಷು ತೇಷುತೇಷು ಕಲೌ ಪ್ರಭುಃ ।
ಅನುಪ್ರವಿಶ್ಯಕುರುತೇ ಯತ್ಸಮೀಹಿತ ಮಚ್ಯುತಃ[1] " ।

ಎಂಗಿರಪಡಿಯೆ ಪರಾಂಕುಶ[2] ಪರಕಾಲಾದಿರೂಪತ್ತಾಲೇ ಅಭಿನವ ಮಾಕ ಒರುದಶಾವತಾರಂ ಪಣ್ಣಿ ಮೇಘಂಗಳ್ ಸಮುದ್ರಜಲತ್ತೈ ವಾಂಗಿ ಸರ್ವೋಪಜೀವ್ಯಮಾನ ತಣ್ಣೀರಾಕ ಉಮಿಳುಮಾಪ್ಪೋಲೆ ವೇದಾರ್ಥಂಗಳಿಲ್ ವೇಂಡುಂ ಸಾರತಮಾಂಶತ್ತೈ ಸರ್ವರುಕ್ಕು[3] ಮಧಿಕ್ಕರಿಕ್ಕಲಾನ ಭಾಷೆಯಾಲೆ ಸಂಗ್ರಹಿತ್ತುಕ್ಕೊಟ್ಟೆಯುಂ,

---

ತಮ್ಮ ವರ್ಣಾಶ್ರಮಧರ್ಮಗಳಲ್ಲನುರುಕ್ತರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯಶೂದ್ರರುಗಳಿಂದಲೂ,ಕೃತಯುಗದಲ್ಲಿ ಸಂಕರ್ಷಣನಿಂದ ಸಾತ್ವತ ಅಂದರೆ ಪಾಂಚರಾತ್ರಪ್ರಕ್ರಿಯೆಯನ್ನು ಹೊಂದಿದ ಶಾಸ್ತ್ರವ್ಯಾವುದೋ ಅದನ್ನು ಅಂಗೀಕರಿಸಿ, ಆ ಶಾಸ್ತ್ರಪ್ರಕ್ರಿಯೆಯೇ ಏನಾದರೂ ವಿಚ್ಯುತಿ ಯಿಂದ ಎಲ್ಲಾವರೂ ಸ್ಖಾಲಿತ್ಯವನ್ನು ಹೊಂದೀತೋ ಎಂಬದಾಗಿ ದ್ವಾ ಪರಯುಗದ ಕೊನೆಯಲ್ಲೂ, ಕಲಿಯುಗದ ಆದಿಯಲ್ಲೂ ಪುನಃ ಪ್ರಕಾಶ ಗೊಳಿಸಲ್ಪಟ್ಟಿತೋ ಅಂತಹ ಪಾಂಚರಾತ್ರಶಾಸ್ತ್ರಾನುಸಾರ ಸ್ವಾಮಿ ಯು ಪೂಜಿಸಲ್ಪಡಲೂ, ಸೇವಿಸಲ್ಪಡಲೂ ಅರ್ಹನು " ಎಂಬದಾಗಿ ಹೇಳಿರುವ ಮೇರಿಗೆ ಅಂತಹ ಸಮಯಗಳಲ್ಲಿ ತಾನು ಮೊದಲು ಪಾಂಚ ರಾತ್ರಶಾಸ್ತ್ರದಲ್ಲಿ ಹೇಳಿದುದನ್ನೇ ಪುನಃ ತಾನೇ ಪ್ರಕಾಶಪಡಿಸಿದುದರಿಂದ ಲೂ ಸ್ವಾಮಿಯು ಪ್ರಥಮಾಚಾರ್ಯನೆಂಬ ತಾತ್ಪರ್ಯವು. (ಸ್ವಾಮಿ ಯು ಹೇಗೆ ಪ್ರಥಮಾಚಾರ್ಯನೆಂಬುವದಕ್ಕೆ ವಿಳನೇದಾದ ಇನ್ನೊಂದು ಕಾರಣವನ್ನು ಹೇಳುತ್ತಾರೆ.)

---

1 ವಿ. ತ. ೧೦೮, ೫೦.

2 ಪರಾಂಕುಶರ್ - ಶಠಗೋಪರೆನಿಸುವ ನಮ್ಮಾಳ್ವಾರವರು, ಪರಕಾಲ ರು - ತಿರುಮಂಗೈ ಆಳ್ವಾರು ಶತ್ರುಗಳಿಗೆ ಯಮಸ್ವರೂಪರು.

3 ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಮಾತ್ರ ವೇದದಲ್ಲಿ ಅಧಿಕಾರವು. ಸ್ತ್ರೀಶೂದ್ರಾದಗಳಿಗಿಲ್ಲವು.

**ಇಪ್ಪಡಿತ್ತಾರ್ ಪ್ರವರ್ತಿಪ್ಪಿತ್ತ ಸತ್ಪಥತ್ತುಕ್ಕು ಪ್ರಕಟರಾಯುಂ ಪ್ರಚ್ಛನ್ನರಾಯುಂ ನಿರುಂದುಳ್ಳ[1] ಪಾಷಂಡಿಕಳಾಲುಪರೋಧಂ ವಾರಾಮೈಕ್ಕಾಕ[2] " ಸಾಕ್ಷಾನ್ನಾರಾಯಣೋ ದೇವಃ ಕೃತ್ವಾ ಮರ್ತ್ಯಮಯೀಂ ತನುಂ । ಮಗ್ನಾನುದ್ಧರತೇ ಲೋಕಾನ್ಕಾರು**

7. ಕಲೌ - ಕಲಿಯುಗದಲ್ಲಿ, ಪ್ರಾಗುತ್ಪನ್ನೇಷು ಭೂತೇಷು - ಮೊದಲು ಹುಟ್ಟಿದ ಚೇತನರುಗಳಲ್ಲಿ, ಪ್ರಭುಃ, ಅಚ್ಯುತಃ - ಸ್ವಾಮಿಯಾದ ನಿತ್ಯನಾದ ಸರ್ವೇಶ್ವರನು, ತೇಷುತೇಷು - ಅವರವರುಗಳಲ್ಲಿ ಅನುಪ್ರವಿಶ್ಯ - ಅನುಪ್ರವೇಶಮಾಡಿದವನಾಗಿ, ಯತ್ಸಮೀಹಿತಂ - ಯಾವುದು ಇಷ್ಟವೋ ಅದನ್ನು, ಕುರುತೇ - ಮಾಡುತ್ತಾನೆ. ಅಂದರೆ ಸ್ವಾಮಿ ಅಚ್ಯುತನು ಮೊದಲು ಕರ್ಮಬದ್ಧರಾಗಿ ಹುಟ್ಟಿದ ಚೇತನರ ಮೂಲಕ ಅವರನ್ನನುಪ್ರವೇಶಮಾಡಿದವನಾಗಿ ಯಾವಯಾವ ಧರ್ಮಸಂಸ್ಥಾಪನೆಗಳಾಗಬೇಕೋ ಅವುಗಳನ್ನೆಲ್ಲಾ ಆ ಚೇತನರ ಮೂಲಕವಾಗಿ ನಡಿಸುತ್ತಾನೆ ಎಂದು ಹೇಳಿರುವ ಮೇರಿಗೆ ಸರ್ವೇಶ್ವರನು, ಶಠಗೋಪ, ತಿರುಮಂಗೈಯಾಳ್ವಾರ್ ಮೊದಲಾದ ಹತ್ತು ಆಳ್ವಾರುಗಳ ರೂಪದಲ್ಲಿ ಹೊಸಬಾದ ಒಂದು ಅನುಪ್ರವೇಶರೂಪವಾದ ದಶಾವತಾರವನ್ನು ಮಾಡಿ, ಮೇಘಗಳು ಹೇಗೆ ಸಮುದ್ರದ ನೀರನ್ನು ಹೀರಿ ಸರ್ವರಿಗೂ ಪ್ರಾಣಧಾರಣೆಗೆ ಅನುಕೂಲವಾಗುವಹಾಗೆ ಒಳ್ಳೇ ತಣ್ಣಗಿರುವ ನೀರ

1 ಪಾಷಂಡಿಗಳೆಂದರೆ—ಅಸಚ್ಛಾಸ್ತ್ರಗಳನ್ನು ಹೇಳುವವರು ವೇದಬಾಹ್ಯರು, ಬೌದ್ಧ, ಕಾಪಾಲಿಕ, ಕ್ಷಪಣಕ, ಚಾರ್ವಾಕಾದಿಗಳು. " ಕಿಂ ದೇವೈಃ ಕಿಂ ದ್ವಿಜೈರ್ವೇದೈಃ ಕಿಂ ಶೌಚೇನಾಂಬುಜನ್ಮನಾ । ಇತ್ಯೇವಂ ವಿಪ್ರವಕ್ಷ್ಯಂತಿ ಪಾಷಂಡೋಪಹತಾಜನಾಃ ॥" ವಿ. ಪು. ೬, ೧, ೫೧. ದೇವತೆಗಳಿಂದಲೇನು, ಬ್ರಾಹ್ಮಣರಿಂದೇನು, ವೇದಗಳಿಂದೇನು, ಶುದ್ಧೋದಕದಲ್ಲಿ ಅವಗಾಹನ ಸ್ನಾನದಿಂದೇನು, ಹೀಗೆಲ್ಲಾ ಪಾಷಂಡಿಗಳು ಕುವಾದಗಳನ್ನು ಮಾಡುವರೆಂಬುದಾಗಿ ಹೇಳಿದೆ.

2 ಜಯಾಖ್ಯಸಂಹಿತೆ.

ಕ್ಯಾಚ್ಛಾಸ್ತ್ರಪಾಣಿನಾ ” ಎನ್ರುಂ, “ ಪೀತಕವಾಡೈ ಪ್ಪಿರಾನಾರ್ ಪಿರಮಗುರುವಾಕಿ ವಂದು[1] ” ಎನ್ರುಂ ಶೊಲ್ಲುಕಿರಪಡಿಯೇ,

ನ್ನು ಭೂಮಿಯಮೇಲೆ ಸುರಿಯುವುವೋ ಹಾಗೆ, ವೇದಾರ್ಥಗಳಲ್ಲಿ ತುಂಬಾ ಸಾರತಮವಾದ ಭಾಗವನ್ನು ಎಲ್ಲರೂ ಅಧಿಕರಿಸಿ ಸಂಗ್ರಹಿಸು ವದಕ್ಕಾಗುವಹಾಗೆ, ಎಲ್ಲರಿಗೂ ಅಂದರೆ ಸ್ತ್ರೀಶೂದ್ರಾದಿಗಳಿಗೂ ತಿಳಿ ಯುವ ತಮಿಳ್‌ಭಾಷೆಯಲ್ಲಿ ದ್ರಾವಿಡಪ್ರಬಂಧರೂಪದಲ್ಲಿ ವೇದಾರ್ಥಗ ಳನ್ನೆಲ್ಲಾ ಸಂಗ್ರಹಿಸಿ ತೋರುವಹಾಗೆ ಅನುಗ್ರಹಿಸಿರುತ್ತಾನೆ.

೮. ಹೀಗೆ ತಾನೇ ನಿಂತು ಪ್ರಚುರಗೊಳಿಸಿದ ಸನ್ಮಾರ್ಗವಾದ ಸಚ್ಛಾಸ್ತ್ರಕ್ಕೆ ಬಹಿರಂಗವಾಗಿಯೂ, ಗೋಪ್ಯವಾಗಿಯೂ ವಿರೋಧಿಗ ಳಾಗಿ ಏರ್ಪಟ್ಟ ಪಾಷಂಡಿಗಳಿಂದ ತೊಂದರೆ ಬಾರದೆ ಇರುವದಕ್ಕಾಗಿ “ ದೇವಃ - ಲೀಲಾಸಕ್ತನಾದ, ಸಾಕ್ಷಾನ್ನಾರಾಯಣಃ - ಸಾಕ್ಷಾತ್ ಶ್ರೀ ಮನ್ನಾರಾಯಣನು, ಮರ್ತ್ಯಮಯೀಂ ತನುಂ - ಮಾನುಷಶರೀರವನ್ನು ಕೃತ್ವಾ - ಮಾಡಿ, ಕಾರುಣ್ಯಾತ್ - ತುಂಬಾ ಕರುಣೆಯಿಂದ, ಮ ಗ್ನಾನ್ - ಸಂಸಾರಸಾಗರದಲ್ಲಿ ಮುಳುಗಿಹೋದ, ಲೋಕಾನ್ - ಜನರ ನ್ನು: ಶಾಸ್ತ್ರಪಾಣಿನಾ - ಶಾಸ್ತ್ರವೆಂಬುವ ಕೈಯನ್ನು ಕೊಟ್ಟು, ಉದ್ಧ ರತೆ - ಮೇಲಕ್ಕೆ ಎತ್ತಿ ಸಂರಕ್ಷಿಸುತ್ತಾನೆ ” ಎಂಬದಾಗಿಯೂ ಮತ್ತು ಪೀತಕವಾಡೈ - ಪೀತಾಂಬರಧಾರಿಯಾದ, ಪಿರಾನಾರ್ - ಪರಮೋಪ ಕಾರನಾಗಿರುವ ಶ್ರೀಮನ್ನಾರಾಯಣನು ಪರಮಗುರುವಾಗಿ, ವಂದು - ಸರ್ವರಿಗೂ ಪರಮಾಚಾರ್ಯನಾಗಿ ಅವತರಿಸಿ, ಎಂಬದಾಗಿಯೂ ಹೇಳಿ ರುವ ಹಾಗೆ, ಅಗಸ್ತ್ಯಋಷಿಯು ವಾಸಮಾಡುತ್ತಿದ್ದ ದಕ್ಷಿಣದೇಶದಲ್ಲಿ ಅನೇಕ ಆಚಾರ್ಯರುಗಳಾದ ಶಠಕೋಪ, ನಾಥ ಯಾಮುನ ಶ್ರೀಯತಿ ವರ್ಯರೆಂಬುವ ವ್ಯಾಜದಿಂದ ಅವತರಿಸಿ ಆ ಕೃಪಾಸಾಗರನು ಕೃಪೆಗೈ ದಿರುತ್ತಾನೆ. ಇದನ್ನೇ ಮನದಲ್ಲಿಟ್ಟು “ ಕಲಿಯುಗದಲ್ಲಿ ಎಲ್ಲಿಯೋ- ಅಲ್ಪಸ್ವಲ್ಪ ಜನರು ಶ್ರೀಮನ್ನಾರಾಯಣನನ್ನೇ ಶ್ರೇಷ್ಠವಾದ ಅಯ

1 ಎ. ತಿ. ೫, ೨, ೭.

**ಅಗಸ್ತ್ಯಸೇವಿತಮಾನ ಡೇಶತ್ತಿಲೆ ಅನೇಕ ದೇಶಿಕಾಪದೇಶ[1] ತ್ತಾಲೆ ಯವತರಿತ್ತರುಳಿನಾರ್. ಇತ್ತೈಕ್ಕಣಿಶಿತ್ತು[2]**

ನಂ - ಎಂದರೆ ಪ್ರಾಪ್ಯಪ್ರಾಪಕ ಆಧಾರವೆಂದು ತಿಳಿದವರಾಗಿರುತ್ತಾರೆ. ಅಂದರೆ ಮೂಲಮಂತ್ರೋಪಾಸಕರಾಗಿರುತ್ತಾರೆ. ಇಂತಹ ಪುಣ್ಯ ಪುರಾಣಪುರುಷರು ದ್ರಾವಿಡದೇಶದಲ್ಲಿ (ದಕ್ಷಿಣದೇಶದಲ್ಲಿ) ಹೆಚ್ಚಾಗಿರುವರು. (ಅದು ಎಲ್ಲಿ ಎಂದರೆ ವ್ಯಕ್ತಪಡಿಸಿ ಹೇಳುತ್ತಾರೆ.) ಎಲ್ಲಿ ತಾಮ್ರಪರ್ಣೀ, ಕಾವೇರೀ ಮೊದಲಾದ ನದಿಗಳು ಸುತ್ತಿರುತ್ತವೆಯೋ ಅಲ್ಲಿರುವ ಜನಗಳು ಆ ನೀರಿನಲ್ಲಿ ಅವಗಾಹನೆಮಾಡಿ ಆ ಪುಣ್ಯತೀರ್ಥಗಳ ನಿರ್ಮಲೋದಕವನ್ನು ಪಾನಮಾಡುವದರಿಂದ ಸಾಧಾರಣವಾಗಿ ಪರಿಶುದ್ಧಾಂತಃಕರಣರಾಗಿ ವಾಸುದೇವನಲ್ಲಿ ತುಂಬಾ ಭಕ್ತಿಯುಳ್ಳವರಾಗುತ್ತಾರೆ." (ಇದು ವಸುದೇವನಿಗೆ ನಾರದರಿಂದ ಉಪದೇಶಿಸಲ್ಪಟ್ಟ ವಿದೇಹರಾಜ ಋಷಭಕುಮಾರ ಸಂವಾದದಲ್ಲಿ ಬರುತ್ತದೆ. ಕಲಿಯುಗದಲ್ಲಿ ಹೀಗೆಯೇ ನಡೆಯುತ್ತೆಂಬದಾಗಿ ಋಷಿಪ್ರೋಕ್ತವಾಗಿರುತ್ತದೆ. ಇವೆಲ್ಲಾ ನಮಗೆ ಯಥಾರ್ಥವಾಗಿ ಈಗ ತೋರುವದರಿಂದ ಅವರುಗಳಿಂದ ಹೇಳಲ್ಪಟ್ಟಿರುವದು ಸಚ್ಛಾಸ್ತ್ರವೆಂದು ನಂಬಲು ತುಂಬಾ ಸಹಕಾರಿಯಾಗಿರುತ್ತದೆ.) ಎಂದು ಶುಕಮಹರ್ಷಿಗಳು ಶ್ರೀಮದ್ಭಾಗವತದಲ್ಲಿ ಹೇಳಿದುತ್ತಾರೆ. (ಇದು ಶ್ರೀಮನ್ನಾಥಮುನಿ, ಯಾಮುನಮುನಿ, ಶ್ರೀರಾಮಾನುಜಮುನಿ ಇವರುಗಳು ಮಾಡಿದ ಮಹೋಪಕಾರಸ್ಮರಣೆಯಿಂದ ಹೇಳಿದ ವಾಕ್ಯವಾಗಿರುತ್ತದೆ.) ("ತಮಿಮಂ ಸರ್ವಸಂಪನ್ನಂ" ಎಂಬುವದನ್ನು ಮೊದಲುಮಾಡಿಕೊಂಡು, " ಮಹರ್ಷಿ ಅರುಳಿಚ್ಚೆಯ್ದಾರ್ " ಎನ್ನುವ ವರಿವಿಗೂ ಸ್ವಾಮಿಯು ಹೇಗೆ ಸರ್ವರಿಗೂ ಪರಮಾಚಾರ್ಯನೆಂಬುವದನ್ನು ಎಂಟು ಕಾರಣಗಳಿಂದ ಉಪಪಾದಿಸಿದರು. ಅವುಗಳು ಸಂಕ್ಷೇಪವಾಗಿ ಯಾವುವಂದರೆ—

1 ಅಪದೇಶವೆಂದರೆ ವ್ಯಾಜ, ನೆಪ.

2 ಕಣಿಶಿತ್ತು - ಅಭಿಪ್ರಾಯಪಟ್ಟುಗೊಂಡು.

" ಕಲೌಖಲುಭವಿಷ್ಯಂತಿನಾರಾಯಣ ಪರಾಯಣಾಃ ।
ಕ್ವಚಿತ್ಕ್ವಚಿನ್ಮಹಾಭಾಗಾ ದ್ರಮಿಡೇಷು ಚ ಭೂರಿಶಃ ।
ತಾಮ್ರಪರ್ಣೀನದೀಯತ್ರ ಕೃತಮಾಲಾಪಯಸ್ವಿನೀ ।
ಕಾವೇರೀಚಮಹಾಭಾಗಾ ಪ್ರತೀಚೀಚ ಮಹಾನದೀ[1] "॥
ಎನ್ರು ಮಹರ್ಷಿ[2] ಅರುಳಿಚ್ಚೆಯ್‌ದಾರ್.

---

1. ಸರ್ವೇಶ್ವರನು ತನ್ನ ಮಗನಾದ ಚತುರ್ಮುಖಬ್ರಹ್ಮನಿಗೆ ಮೊದಲು ವೇದಗಳ ರೂಪದಲ್ಲಿ ಶಾಸ್ತ್ರಾರ್ಥಗಳನ್ನುಪದೇಶಿಸಿ, ಅವುಗಳನ್ನು ಕೊಟ್ಟು, ರಾಕ್ಷಸರು ಅವುಗಳನ್ನಪಹರಿಸಲು, ಪುನಃ ಅವುಗಳನ್ನು ತಂದುಕೊಟ್ಟನು.

2. ಆ ಚತುರ್ಮುಖನಿಂದ ಸನತ್ಕುಮಾರನಿಗೆ ಹಾಗೆಯೇ ಗುರುಶಿಷ್ಯಕ್ರಮದಿಂದ ಉಪದೇಶವು ಪರಂಪರೆಯಾಗಿ ಬರುವಹಾಗೆ ಮಾಡಿ, ನಾರದ, ಪರಾಶರ, ಶುಕಮಹರ್ಷಿಗಳ ಮೂಲಕ ಈ ಬ್ರಹ್ಮವಿದ್ಯೆಯು ಶಿಥಿಲವಾಗದ ಹಾಗೆ ಕಾಪಾಡಿದನು.

3. ವ್ಯಾಸಾದಿಗಳನ್ನು ಅನುಪ್ರವೇಶಮಾಡಿ ಭಾರತ, ಬ್ರಹ್ಮಸೂತ್ರ ಮೊದಲಾದವುಗಳನ್ನು ರಚಿಸುವಹಾಗೆ ಮಾಡಿದನು. ಮಹರ್ಷಿಗಳು ಸ್ಮೃತಿ, ಇತಿಹಾಸ, ಪುರಾಣಗಳನ್ನು ರಚಿಸಿ, ಶಾಸ್ತ್ರಪ್ರಚಾರ ನಡೆಯುವಹಾಗೆ ಮಾಡಿದನು.

4. ತಾನೇ ಹಂಸ, ಮತ್ಸ್ಯ, ಹಯಗ್ರೀವ, ಗೀತಾಚಾರ್ಯ ಮೊದಲಾದ ಅವತಾರಗಳನ್ನೆತ್ತಿ ತತ್ತ್ವಹಿತಪುರುಷಾರ್ಥಗಳನ್ನು ಬೋಧಿಸಿದನು.

---

1 ಶ್ರೀಮದ್ಭಾಗವತ ೧೧, ೫, ೩೮-೪೦. ಅಲ್ಲಿ " ಕಾವೇರೀಚ ಮಹಾಪುಣ್ಯಾ ಪ್ರತೀಚೀಸುರವರ್ತ್ಮಗಾ " ಎಂಬದಾಗಿರುತ್ತದೆ. " ಯೇ ಪಿಬಂತಿ " ಎಂದು ಇರುವದರಿಂದ ನೀರನ್ನು ಕುಡಿಯುವದೂ ಅಲ್ಲದೆ ಆ ತೀರ್ಥದಲ್ಲಿ ಅವಗಾಹನವೂ ಹೇಳಲ್ಪಟ್ಟಿತು.

2 ಶುಕಮಹರ್ಷಿಯು.

## ಇನ್ನಾಚಾರ್ಯರ್ಕಳಿಲ್ ಈಶ್ವರಮುನಿಕಳ್‌ಶಿಷ್ಯ, ನಾಥಮುನಿಕಳ್.

6. ಇಂತಹ ಉಪದೇಶವು ಭಾಗವತಾಂಗೀಕಾರವಿಲ್ಲದಿದ್ದರೆ ಸರಿಯಲ್ಲವೆಂದು ತಿಳಿದು ಮಹಾಭಾಗವತಾಗ್ರೇಸರರಾದ ಭೀಷ್ಮಾದಿಗಳು ಅದನ್ನೇ ಸಮರ್ಥನಮಾಡುವಹಾಗೆ ಮಾಡಿದನು.

6. ಭಗವಚ್ಛಾಸ್ತ್ರವಾದ ಪಾಂಚರಾತ್ರಾಗಮಮೂಲಕವಾಗಿ ಶಾಸ್ತ್ರಾರ್ಥಗಳನ್ನು ಪ್ರಚುರಗೊಳಿಸಿದನು.

7. ಹತ್ತು ಆಳ್ವಾರುಗಳಲ್ಲಿ ಅನುಪ್ರವೇಶಮಾಡಿ ಒಂದು ನವೀನ ದಶಾವತಾರಮಾಡಿಯೋ ಎಂಬುವಹಾಗೆ ಎಲ್ಲರಿಗೂ ವೇದಾರ್ಥಗಳು ಅನುಕೂಲಿಸುವಹಾಗೆ ತಮಿಳ್‌ಭಾಷೆಯಲ್ಲಿ ದ್ರಾವಿಡಪ್ರಬಂಧರೂಪದಲ್ಲಿ ರಚಿಸುವಹಾಗೆ ಮಾಡಿದನು.

8. ವೇದಬಾಹ್ಯರಾದ ಪಾಷಂಡಿಗಳ ಮೂಲಕ ಈ ಅಮೋಘಶಾಸ್ತ್ರಕ್ಕೆ ತೊಂದರೆಬಾರದಹಾಗೆ ಆಚಾರ್ಯರೂಪದಲ್ಲಿ ನಾಥಮುನಿ, ಆಳವಂದಾರ್, ಭಾಷ್ಯಕಾರರು ಮೊದಲಾದವರಾಗಿ ಅವತರಿಸಿ ಅಧ್ಯಾತ್ಮವಿದ್ಯೆಯನ್ನು ಸ್ಥಿರವಾಗಿ ಸ್ಥಾಪಿಸುವ ಹಾಗೆ ಕರುಣಿಸಿದನು. (ಶ್ರೀನಿಗಮಾಂತದೇಶಿಕರೂ ಕೂಡ ಈ ಗೋಷ್ಠಿಯಲ್ಲಿ ಸೇರಿದವರಾಗಿ ನಾವು ಭಾವಿಸತಕ್ಕದ್ದು.)

ಈ ಕಾರಣಗಳಿಂದ ಸ್ವಾಮಿಯು ಎಲ್ಲರಿಗೂ ಆದಿಗುರುವು.

ಮುಂದಕ್ಕೆ "ಆಚಾರ್ಯಾಣಾಮಸಾವಸಾವಿತ್ಯಾಭಗವತ್ತಃ" ಎಂದು ಹೇಳಿರುವಮೇರಿಗೆ ಆಚಾರ್ಯರುಗಳಲ್ಲಿ ಇವರಿವರು ಮುಖ್ಯವಾದವರೆಂದು ಹೇಳುವದು ಆವಶ್ಯಕವೆಂದು ಹಿಂದೆ ಸ್ಥಾಪಿಸಿದುದರಿಂದ ಅಂತಹ ಆಚಾರ್ಯರುಗಳು ಯಾರೆಂಬುವದನ್ನು ತಿಳಿಸುತ್ತಾರೆ. ಶ್ರೀಮದ್ವಿಶಿಷ್ಟಾದ್ವೈತಸಿದ್ಧಾಂತವು ಅನಾದಿಯಾದುದಾದರೂ ಅದೇ ಯಥಾರ್ಥವಾದ ಸಿದ್ಧಾಂತವೆಂಬುವದಾಗಿ ಆದಿಯಲ್ಲಿ ಸ್ಥಾಪಿಸಿದವರು ನಾಥಮುನಿಗಳು. ಈ ಅಭಿಪ್ರಾಯವನ್ನು ಶ್ರೀನಿಗಮಾಂತದೇಶಿಕರವರು ತಾವು ಅನುಗ್ರಹಿಸಿದ ಸಂಕಲ್ಪಸೂರ್ಯೋದಯದಲ್ಲಿ ಸೂಚಿಸಿರುತ್ತಾರೆ.

**ಇವರ್ ನ್ಯಾಯತತ್ತ್ವಮೆಂಗಿರ ಶಾಸ್ತ್ರಮುಂ ಯೋಗರಹಸ್ಯಮು ಮರುಳಿಚ್ಚೆಯ್ದಾರ್. ಇವರುಕ್ಕು ಶ್ರೀಮಧುರಕವಿಗಳ್ ಮುದಲಾಕವುಂಡಾನ ಸಂಪ್ರದಾಯಪರಂಪರೈಯಾಲುಂ, ತಿರುವಾಯ್ಮೊಳಿಮುಖತ್ತಾಲುಂ, ಯೋಗದಶೈಯಿಲೆ ಸಾಕ್ಷಾತ್ಕೃತರಾಯುಂ ನಮ್ಮಾಳ್ವಾರಾಚಾರ್ಯರಾನಾರ್. ನಾಥಮುನಿಗಳ್[1] ಪಿಳ್ಳೈ**

---

"ನಾಥೋಪಜ್ಞಂ ಪ್ರವೃತ್ತಂ ಬಹುಭಿರುಪಚಿತಂ ಯಾಮುನೇಯ ಪ್ರಬಂಧೈಃ !
ತ್ರಾತಂ ಸಮ್ಯಗ್ಯತೀಂದ್ರೈರಿದ ಮಖಿಲತಮಃ ಕರ್ಶನಂ ದರ್ಶನಂ ನಃ ||
(ಸಂಕಲ್ಪಸೂರ್ಯೋದಯ, ದ್ವಿತೀಯಾಂಕಃ ೪೯.)

"ನಮ್ಮ ಸಿದ್ಧಾಂತವಾದರೋ ಪ್ರಥಮದಲ್ಲಿ ನಾಥಮುನಿಗಳ ಆದ್ಯವಾದ ಜ್ಞಾನದಿಂದುಂಟಾದುದು, ಯಾಮುನಾಚಾರ್ಯಗ್ರಂಥಗಳಿಂದ ತುಂಬಾ ವೃದ್ಧಿಯನ್ನು ಹೊಂದಿದುದು, ಶ್ರೀಭಾಷ್ಯಕಾರರಿಂದ ಚೆನ್ನಾಗಿ ರಕ್ಷಿಸಲ್ಪಟ್ಟದುದು, ಈ ನಮ್ಮಗಳ ಸಿದ್ಧಾಂತವು ಸಮಸ್ತವಾದ ಇತರ ಸಿದ್ಧಾಂತಗಳಲ್ಲಿನ ಅಜ್ಞಾನಾಂಧಕಾರವನ್ನು ಹೋಗಲಾಡಿಸುವಂಥಾದ್ದೆಂದು ಹೇಳಿರುತ್ತಾರೆ. ಆದುದರಿಂದ ಗುರುಪರಂಪರೆಯಲ್ಲಿ ಮೊದಲು ನಾಥಮುನಿಗಳ ಹೆಸರನ್ನು ಹೇಳಿ ಅನಂತರ ಅವರಿಗೆ ನಮ್ಮಾಳ್ವಾರ್ರುವರು ಗುರು ಎಂದು ಹೇಳುತ್ತಾರೆ.

ಈ ಗುರುಪರಂಪರೆಯಲ್ಲಿ ಮುಖ್ಯರಾದವರು ಶ್ರೀಮನ್ನಾಥಮುನಿಗಳು. ಇವರು ಈಶ್ವರಮುನಿಗಳ ಮಕ್ಕಳು. ಈ ನಾಥಮುನಿಗಳು ನ್ಯಾಯತತ್ತ್ವವೆಂಬ ಶಾಸ್ತ್ರವನ್ನೂ ಯೋಗರಹಸ್ಯವನ್ನೂ ರಚಿಸಿರುತ್ತಾರೆ. (ಇಂತಹ ಅಮೋಘಗ್ರಂಥಗಳನ್ನು ರಚಿಸಿದ್ದರಿಂದ ಶ್ರೀನಿಗಮಾಂತದೇಶಿಕರವರಿಗೆ ಅವರಲ್ಲಿ ತುಂಬಾ ಗೌರವವು. ಈ ನಾಥಮುನಿ

---

1 ನಾಥಮುನಿಗಳ ಚರಿತ್ರೆಯು ಮುಂದೆ ಸಂಗ್ರಹವಾಗಿ ಸೂಚಿಸಿರುತ್ತದೆ.

**ಈಶ್ವರಭಟ್ಟಾಳ್ವಾರ್. ಈಶ್ವರಭಟ್ಟಾಳ್ವಾರ್ ಪಿಳ್ಳೈ ಆಳವಂದಾರ್[1];**
**ಇವರರುಳಿಚ್ಚೆಯ್ದ ಪ್ರಬಂಧಂಗಳ್—(1) ಆಗಮಪ್ರಾಮಾಣ್ಯ ಮುಂ, (2) ಪುರುಷನಿರ್ಣಯಮುಂ, (3) ಆತ್ಮಸಿದ್ಧಿ, (4) ಈಶ್ವರ ಸಿದ್ಧಿ, (5) ಸಂವಿತ್ಸಿದ್ಧಿ, ಎಂಗಿರಸಿದ್ಧಿತ್ರಯಮುಂ, (6) ಶ್ರೀಗೀತಾರ್ಥಸಂಗ್ರಹಮುಂ, (7) ಸ್ತೋತ್ರಮುಂ, (8) ಚತುಶ್ಶ್ಲೋ**

ಗಳ ಅವತಾರಸ್ಥಳವಾದ ವೀರನಾರಾಯಣಪುರಕ್ಕೆ ಹೋಗಿ ಅಲ್ಲಿ ಪ್ರತಿಷ್ಠಿತರಾಗಿರುವ ನಾಥಮುನಿಗಳ ಸೇವೆಮಾಡಿ,

ನಾಥೇನ ಮುನಿನಾತೇನ ಭವೇಯಂ ನಾಥವಾನಹಂ ।
ಯಸ್ಯನೈಗಮಿಕಂ ತತ್ವಂ ಹಸ್ತಾಮಲಕತಾಂಗತಂ ॥

ಎಂಬ ಶ್ಲೋಕದಿಂದ ಕೊಂಡಾಡಿರುತ್ತಾರೆ. ಯಾರಿಗೆ ವೇದಗಳಲ್ಲೆಲ್ಲಾ ತೋರುವ ಈವಿಶಿಷ್ಟಾದ್ವೈತತತ್ವವು ಕರತಲಾಮಲಕಭಾವವನ್ನು ಹೊಂದಿತೋ ಅಂದರೆ ಕೈಯಲ್ಲಿರುವ ನೆಲ್ಲಿಕಾಯಿಯು ಎಷ್ಟು ವಿಶದವಾಗಿ ತೋರುವದೋ ಅಷ್ಟು ಈ ವಿಶಿಷ್ಟಾದ್ವೈತವು ವಿಶದೀಕರಿಸಲ್ಪಟ್ಟಿತೋ ಅಂತಹ ನಾಥಮುನಿಗಳಿಂದ ನಾನು ಸ್ವಾಮಿಯನ್ನು ಹೊಂದಿದವನಾದೆನು " ಎಂಬುದು ಈ ಶ್ಲೋಕಾರ್ಥವು. (ಈ ನಾಥಮುನಿಗಳಿಗೆ ಆಚಾರ್ಯರು ನಮ್ಮಾಳ್ವಾರೆಂಬದಾಗಿ ಹೇಳುತ್ತಾರೆ. ಆದರೆ ನಮ್ಮಾಳ್ವಾರು ಅವತರಿಸಿದ್ದು ಕಲಿಯುಗದ ೪೩ನೇ ವರುಷ, ನಾಥಮುನಿಗಳು ಅವತರಿಸಿದ್ದು ಕಲಿ ೩೬೮೪ನೇದಾದ ಶೋಭಕೃದ್ವರ್ಷದ ಆನಿಮಾಸ ಅನೂರಾಧಾನಕ್ಷತ್ರದಲ್ಲಿ ಹುಟ್ಟಿದವರು, ಹೀಗೆ ೩೬೪೧ ವರುಷ ವ್ಯತ್ಯಾಸವಿರುವ ನಮ್ಮಾಳ್ವಾರವರು ನಾಥಮುನಿಗಳಿಗೆ ಹೇಗೆ ಆಚಾರ್ಯರಾದಾರು ಎಂಬ ಸಂದೇಹನಿವೃತ್ತಿಗಾಗಿ ಅಪ್ಪಣೆಕೊಡಿಸುತ್ತಾರೆ. ಏನೆಂದರೆ, ಯೋಗದೆಶೆಯಲ್ಲಿ ಸಾಕ್ಷಾತ್ಕೃತರಾಗಿ ಆಚಾರ್ಯರೆಂದು ಹೇಳುತ್ತಾರೆ.) ಶ್ರೀಮಧುರಕವಿಯಾಳ್ವಾರವರು ನಮ್ಮಾಳ್ವಾರನ್ನು ಆಚಾರ್ಯರಾಗಿ ಭಾವಿಸಿ ಆಚಾರ್ಯನಿಷ್ಠೆಯನ್ನು ಪ್ರಚುರಗೊಳಿಸಿ

1 ಇವರ ಸಂಗ್ರಹಚರಿತ್ರೆಯು ಮುಂದೆ ಕಾಣಿಸಿರುತ್ತದೆ.

ಕಿಯುಮುಂ, ಅಳ ಎಟ್ಟು. ಆಳವಂದಾರ್ ಪಿಳ್ಳೈ ಶೊಟ್ಟನಂಬಿ, ಶೊಟ್ಟೆ ನಂಬಿಪಿಳ್ಳೈಯೆನ್ನಾಚ್ಚಾರ್. ಎನ್ನಾಚ್ಚಾರ್ ಪಿಳ್ಳೈಕಳ್ ನಾಲ್ವರ್— ಇವರ್ಕಳಿಲ್ ಒರುವರ್ ಪಿಳ್ಳೈಯಪ್ಪರ್. ಇವರುಡೈಯ ಪಿಳ್ಳೈ ತೋಳಪ್ಪರ್. ತೋಳಪ್ಪರ್ಕ್ಕು ಪೆಣ್ಪಿಳ್ಳೈಕಳಿರವರ್.

ನಾಥಮುನಿಗಳ್ ಶ್ರೀಪಾದತ್ತೈ ಆಶ್ರಯಿತ್ತ ಮುದಲಿಗಳ್— (1) ಉಯ್ಯಕೊಂಡಾರ್, (2) ಕುರುಕೈಕ್ಕಾವಲಪ್ಪರ್, (3) ನಂಬಿಕರುಣಾಕರದಾಸರ್, (4) ಏರುತಿರುವುಡೈಯಾರ್, (5) ತಿರುಕ್ಕಣ್ಣಮಂಗೈಯಾಂಡಾರ್, (6) ವಾನಮಾದೇವಿಯಾಂಡಾರ್,

---

ಅದು ಸಂಪ್ರದಾಯವಾಗಿ ಬಂದುದರಿಂದಲೂ ನಮ್ಮಾಳ್ವಾರು ಅನುಗ್ರಹಿಸಿದ ತಿರುವಾಯಿಮೊಳಿಯ ಹತ್ತು ಪಾಶುರಗಳನ್ನು ಮಾತ್ರ ಕೇಳಿದುದರಿಂದ ಅದರಲ್ಲಿ ವಿಶೇಷ ಅಭಿರುಚಿಯುಂಟಾದುದರಿಂದಲೂ ಯೋಗದೆಶೆಯಲ್ಲಿ ನಮ್ಮಾಳ್ವಾರನ್ನು ಸಾಕ್ಷಾತ್ಕರಿಸಿ ಅವರಿಂದ ತಿರುಮಂತ್ರ ಅದರ ಅರ್ಥ ವ್ಯಾಸಸೂತ್ರ, ತಿರುವಾಯ್ ಮೊಳಿ ಮೊದಲಾದವುಗಳ ಉಪದೇಶವನ್ನು ಪಡೆದವರಾದುದರಿಂದ ನಮ್ಮಾಳ್ವಾರ್ರವರು ಶ್ರೀನಾಥಮುನಿಗಳಿಗೆ ಆಚಾರ್ಯರೆಂದು ಭಾವಿಸತಕ್ಕದ್ದು. ಶ್ರೀಮನ್ನಾಥಮುನಿಗಳ ಮಕ್ಕಳು ಈಶ್ವರಭಟ್ಟಾಳವಾರ್ ಎಂಬುವರು ಈ ಈಶ್ವರಭಟ್ಟಾಳವಾನರ ಮಕ್ಕಳು. ಆಳವಂದಾರ್ (ಇವರಿಗೆ ಯಾಮುನಾಚಾರ್ಯರು ಅಥವಾ ಯಾಮುನೇಯರು ಎಂಬದಾಗಿಯೂ ಹೆಸರುಂಟು.) ಇವರು ದಯಪಾಲಿಸಿದ ಗ್ರಂಥಗಳೆಂಟು—(1) ಆಗಮಪ್ರಾಮಾಣ್ಯ, (2) ಪುರುಷನಿರ್ಣಯಂ, (3) ಆತ್ಮಸಿದ್ಧಿ, (4) ಈಶ್ವರಸಿದ್ಧಿ, (5) ಸಂವಿತ್ಸಿದ್ಧಿ ಎಂಬ ಸಿದ್ಧಿತ್ರಯವು, (6) ಗೀತಾರ್ಥಸಂಗ್ರಹ, (7) ಸ್ತೋತ್ರರತ್ನ, (8) ಚತುಶ್ಲೋಕಿ.

ಆಳವಂದಾರರ ಮಕ್ಕಳು ಶೊಟ್ಟನಂಬಿಯು. ಈ ಶೊಟ್ಟನಂಬಿಯ ಕುಮಾರರು ಎನ್ನಾಚ್ಚಾರ್. ಈ ಎನ್ನಾಚ್ಚಾರರವರ ಪುತ್ರರುಗಳು ನಾಲ್ಕು ಜನರು. ಅವರಲ್ಲೊಬ್ಬರು ಪಿಳ್ಳೈಯಪ್ಪರ್. ಅವರ

(7) ಉರುಪಟ್ಟೂರಾಚ್ಚಾನ್ಪಿಳ್ಳೈ, (8) ಶೋಕತ್ತೂರಾಳ್ವಾನ್ ಆಕವಣ್ಣರ್.

ಉಯ್ಯಕೊಂಡಾರ್ ಶ್ರೀಪಾದತ್ತೈ ಆಶ್ರಯಿತ್ತವರ್ಗಳ್ ಐವರ್. ಅವರ್ಗಳಾಕಿರಾರ್—(1) ಮಣಕ್ಕಾಲ್ ನಂಬಿ, (2) ತಿರುವಲ್ಲಿಕ್ಕೇಣಿಪಾಣ್ಪೆರುಮಾಳರೈಯರ್, (3) ಶೇಟ್ಟಲೂರ್ ಶೆಂಡಲಂಕಾರರ್, (4) ಶ್ರೀಪುಂಡರೀಕದಾಸರ್, (5) ಉಲಕಪ್ಪೆರುಮಾಳ್ನಂಗೈ.

ಮಣಕ್ಕಾಲ್ ನಂಬಿಶ್ರೀಪಾದತ್ತೈ ಆಶ್ರಯಿತ್ತಮುದಲಿಗಳ್ ಐವರ್. ಅವರ್ಗಳಾಗಿರಾರ್—(1) ಆಳವಂದಾರ್, (2) ತೆಯ್ವತ್ತುಕ್ಕರಶುನಂಬಿ, (3) ಗೋಮಠತ್ತುತಿರುವಣ್ಣಕರಪ್ಪನ್, (4) ತಿರುಪ್ಪುಳ್ಳೂರಾವುಡೈಯಪಿಳ್ಳೈ, (5) ಆಚ್ಚಿ.

ಆಳವಂದಾರ್ ಶ್ರೀಪಾದತ್ತೈ ಆಶ್ರಯಿತ್ತವರ್ಗಳ್ ಪದಿನೈವರ್. ಅವರ್ಗಳಾಕಿರಾರ್—(1) ಪೆರಿಯನಂಬಿ, (2) ತಿರುಕ್ಕೋಟ್ಟಿಯೂರ್ ನಂಬಿ, (3) ತಿರುಮಾಲೈಯಾಂಡಾನ್, (4) ಆಳವಂದಾರಾಳ್ವಾರ್, (5) ತಿರುಮಲೈನಂಬಿ, (6) ಈಶಾಂಡಾನ್, (7) ತೆಯ್ವವಾರಿಯಾಂಡಾನ್, (8) ಶಿರಿಯಾಂಡಾನ್, (9) ತಿರುಮೊಕೂರಪ್ಪನ್, (10) ತಿರುಮೊಕೂರ್ನಿನ್ರಾರ್, (11) ತೆಯ್ವಪ್ಪೆರುಮಾಳ್, (12) ತಿರುಮಂಕೈಯಾಳಿಯಾರ್, (13) ಪಿಳ್ಳೈ ತಿರುಮಾಲಿರುಂಶೋಲೈದಾಸರ್, (14) ಮಾರನೇರ್ನಂಬಿ, (15) ಆಳ್ಕೊಂಡಿ.

---

ಮಕ್ಕಳು (1) ತೋಳಪ್ಪರು. ಈ ತೋಳಪ್ಪರಿಗೆ ಇಬ್ಬರು ಹೆಣ್ಣುಮಕ್ಕಳು.

ನಾಥಮುನಿಗಳ ತಿರುವಡಿಯನ್ನಾಶ್ರಯಿಸಿದ ಜ್ಞಾನಿಗಳೆಂಟು ಮಂದಿಯು. ಅವರು ಯಾರೆಂಬುದನ್ನು ತಿಳಿಸಿರುತ್ತಾರೆ.

---

1 ಇವರಿಗೆ ಶ್ರೀಪುಂಡರೀಕಾಕ್ಷರೆಂಬದಾಗಿಯೂ ಹೆಸರುಂಟು.

**ಪೆರಿಯನಂಬಿಶ್ರೀಪಾದತ್ತೈ ಆಶ್ರಯಿತ್ತವರ್ಕಳ್ ಆರು ವರ್ ; ಅವರ್ಕ್ಕಳಾಕಿರಾರ್—(1) ಎಂಬೆರುಮಾನಾರ್. (ಶ್ರೀಭಗವಾ‌ಭಾಷ್ಯಕಾರರ್), (2) ಮಲೈಕುನಿಯನಿನ್ರಾರ್, (3) ಆರ್ಯ ಶ್ರೀಶಠಗೋಪದಾಸರ್, (4) ಅಣಿಯರಂಗತ್ತಮುದನಾರ್, (5) ತಿರುವಾಯ್ಕಲಮುಡೈಯಾನ್ಭಟ್ಟರ್, (6) ತಿರುಕ್ಕಚ್ಚಿನಂಬಿ.**

ಉಯ್ಯಕೊಂಡಾರರ ಪಾದವನ್ನಾಶ್ರಯಿಸಿದ ಶಿಷ್ಯರುಗಳು ಐದು ಮಂದಿಯು. ಅವರು ಯಾರೆಂಬುವದನ್ನು ತಿಳಿಸುತ್ತಾರೆ.

ಉಯ್ಯಕೊಂಡಾರರ ಶಿಷ್ಯರಾದ ಮಣಕ್ಕಾಲನಂಬಿ ಪಾದವನ್ನು ಆಶ್ರಯಿಸಿದ ಜ್ಞಾನಿಗಳು ಐದು ಜನರು. ಇವರ್ಯಾರೆಂಬುವದನ್ನು ತಿಳಿಸುತ್ತಾರೆ. ಅವರಲ್ಲಿ ಆಳವಂದಾರರು ಒಬ್ಬರು.

ಈ ಆಳವಂದಾರ ಚರಣಕಮಲವನ್ನು ಆಶ್ರಯಿಸಿದ ಶಿಷ್ಯರು ೧೫ ಮಂದಿಯು. ಆವರ್ಯಾರೆಂಬುವದನ್ನು ತಿಳಿಸಿ, ಇವರುಗಳಲ್ಲಿ ಶ್ರೀಭಾಷ್ಯಕಾರರ ಗುರುಗಳಾದ ಪೆರಿಯನಂಬಿ, ತಿರುಕ್ಕೋಟ್ಟಿಯೂರ್ ನಂಬಿ, ತಿರುಮಾಲೈಯಾಂಡಾನ್, ಆಳವಂದಾರ್ಆಳವಾರ್‌ಗಳು ಈ ಆಳವಂದಾರರ ಶಿಷ್ಯರುಗಳೆಂದು ಸೂಚಿಸುತ್ತಾರೆ.)

ಪೆರಿಯನಂಬಿಯ ಪಾದಕಮಲವನ್ನಾಶ್ರಯಿಸಿದವರು ಆರುಜನ ಮಹಾನುಭಾವರು. (ಅವರಲ್ಲಿ ಮುಖ್ಯರಾದವರು ಎಂಬೆರುಮಾನಾರ್ ನಮ್ಮ ಮತೋದ್ಧಾರಕರಾದ ಆದಿಶೇಷಾವತಾರಿಯಾದ ಶ್ರೀರಾಮಾನುಜಾಚಾರ್ಯರವರು) ಈ ಆರುಜನ ಶಿಷ್ಯರ ಹೆಸರುಗಳನ್ನು ತಿಳಿಸುತ್ತಾರೆ.

(ಶ್ರೀಭಾಷ್ಯಕಾರರು ಪೆರಿಯನಂಬಿ ಅಲ್ಲದೆ ಇನ್ನೂ ನಾಲ್ಕು ಜನ ಗುರುಗಳಿಂದ ಉಪದೇಶವನ್ನು ಹೊಂದಿದರೆಂಬುವದನ್ನು ತಿಳಿಸುತ್ತಾರೆ.) ಎಂಬೆರುಮಾನಾರರು ತಿರುಕ್ಕೋಟಿಯೂರ್‌ನಂಬಿಯಿಂದ ಮಂತ್ರರಹಸ್ಯಗಳ ಅರ್ಥವನ್ನೆಲ್ಲಾ ಶಿಕ್ಷಿಸಲ್ಪಟ್ಟರು. ಶ್ರೀ ತಿರುಮಾಲೈಯಾಂಡಾನವರಿಂದ ತಿರುವಾಯ್‌ಮೊಳಿಯ ಅರ್ಥಗಳನ್ನು ಕೇಳಿ ತಿಳಿದುಕೊಂಡರು. ಆಳವಂದಾರಾಳ್‌ವಾರರ ಪಾದದಲ್ಲಿ ತಿರು

ಎಂಬೆರುಮಾನಾರ್, (1) ತಿರುಕ್ಕೋಟ್ಟಿಯೂರ್ ನಂಬಿ ಶ್ರೀಪಾದತ್ತಿಲೆ ರಹಸ್ಯಾರ್ಥಂಗಳ್ ಶಿಕ್ಷಿತ್ತಾರ್; (2) ತಿರುಮಾಲೈಯಾಂಡಾರ್ ಶ್ರೀಪಾದತ್ತಿಲೆ ತಿರುವಾಯ್ಮೊಳಿ [ಕ್ಕು ಅರ್ಥಂ] ಕೇಟ್ಟರುಳಿನಾರ್ ; (3) ಆಳವಂದಾರ್ ಆಳವಾರ್ ಶ್ರೀಪಾದತ್ತಿಲೆ ತಿರುವಾಯ್ಮೊಳಿಯುಮೋದಿ ಸ್ತೋತ್ರಾದಿಗಳರುಳಿಚ್ಚೆಯುಂ ನಲ್ವಾರ್ತ್ತೈಗಳುಂ ಕೇಟ್ಟರುಳಿನಾರ್ ; (4) ತಿರುಮಲೈನಂಬಿ ಶ್ರೀಪಾದತ್ತಿಲೆ ಶ್ರೀಮದ್ರಾಮಾಯಣಂ ಕೇಟ್ಟರುಳಿನಾರ್. ಇವರರುಳಿಚ್ಚೆಯ್ದ ಪ್ರಬಂಧಗಳ್—(1) ಶ್ರೀಭಾಷ್ಯಂ, (2) ದೀಪಂ, (3) ಸಾರಂ, (4) ವೇದಾರ್ಥಸಂಗ್ರಹಂ, (5) ಶ್ರೀಗೀತಾಭಾಷ್ಯಂ (6) ಶಿರಿಯಗದ್ಯಂ, (7) ಪೆರಿಯಗದ್ಯಂ, (8) ಶ್ರೀವೈಕುಂಠ

---

ವಾಯ್ಮೊಳಿಯನ್ನು ವ್ಯಾಸಂಗಮಾಡಿ ಸ್ತೋತ್ರ ಮೊದಲಾದವುಗಳನ್ನು ದಯಮಾಲಿಸಲಾಗಿ ಅವುಗಳನ್ನು ಕೇಳಿದವರಾದರು. ತಿರುಮಲೈನಂಬಿಯ ಮೂಲಕ ಶ್ರೀಮದ್ರಾಮಾಯಣದ ಸ್ವಾರಸ್ಯಾರ್ಥಗಳನ್ನೆಲ್ಲಾ ಕೇಳಿ ತಿಳಿದವರಾದರು. ಶ್ರೀಭಾಷ್ಯಕಾರರು ದಯಮಾಲಿಸಿದ ಗ್ರಂಥಗಳು ಒಂಭತ್ತು. (ಒಂಭತ್ತೇಯಾದರೂ ತುಂಬಾ ಅಮೋಘವಾದವುಗಳು—1. ಶ್ರೀಭಾಷ್ಯ—ಇದು ವ್ಯಾಸಸೂತ್ರಗಳಿಗೆ ಭಾಷ್ಯವು. ಹೀಗೆ ಭಾಷ್ಯವನ್ನು ಬರೆದುದರಿಂದಲೇ ಇವರಿಗೆ ಶ್ರೀಭಾಷ್ಯಕಾರರೆಂಬ ನಾಮಧೇಯ ಉಂಟಾಯಿತು. 2. ವೇದಾಂತದೀಪ—ಇದು ವ್ಯಾಸಸೂತ್ರಗಳ ಸಿದ್ಧಾಂತಾರ್ಥವು. ಇದು ದೀಪದ ಹಾಗೆ ಸೂತ್ರಾರ್ಥವನ್ನು ಚೆನ್ನಾಗಿ ಪ್ರಕಾಶಗೊಳಿಸುತ್ತದೆ. 3. ವೇದಾಂತಸಾರ—ಸೂತ್ರಗಳಸಾರವಾದ ಅರ್ಥವನ್ನು ಸೂಚಿಸುತ್ತದೆ. 4. ವೇದಾರ್ಥಸಂಗ್ರಹ 5. ಗೀತಾಭಾಷ್ಯ—ಭಗವದ್ಗೀತೆಗೆ ವಿಶಿಷ್ಟಾದ್ವೈತ ಭಾಷ್ಯವು. 6. ಶಿರಿಯಗದ್ಯಂ—ಚಿಕ್ಕಗದ್ಯವು, ಶ್ರೀರಂಗಗದ್ಯವು. 7. ಪೆರಿಯಗದ್ಯಂ—ಶರಣಾಗತಿಗದ್ಯವು, ಇದು ಪ್ರತಿದಿನದಲ್ಲೂ ಪಠನಮಾಡತಕ್ಕ ಗ್ರಂಥವು. 8. ಶ್ರೀವೈಕುಂಠಗದ್ಯಂ (ಈ ಮೂರು ಗದ್ಯಗಳಿಗೂ ಗದ್ಯತ್ರಯವೆಂಬದಾಗಿ ಹೆಸರು. ಇವುಗಳಿಗೆ ಶ್ರೀನಿಗಮಾಂತದೇಶಿಕ

**ಗದ್ಯಂ, (9) ನಿತ್ಯಂ ಆಕಒಂಪತು. ಇವರ್ ಶ್ರೀಪಾದತ್ತಿಲ್ ಆಶ್ರಯಿತ್ತಮುದಲಿಗಳೈ ತಂತಾಂಸಂಪ್ರದಾಯಪ್ಪಡಿಗಳಿಲೆಯರಿಂದುಕೊಳ್ವದು.**

---

ರವರು ಶ್ರೀಮದ್ರಹಸ್ಯರಕ್ಷೆ ಎಂಬ ವ್ಯಾಖ್ಯಾನ ಬರೆದಿರುತ್ತಾರೆ). 9. ನಿತ್ಯಂ—ಇದು ನಿತ್ಯಕರ್ಮಾನುಷ್ಠಾನವಿಷಯವು ಎಂಬದಾಗಿ ಒಂಭತ್ತು ಗ್ರಂಥಗಳು. ಈ ಯತೀಂದ್ರರ ಪಾದವನ್ನಾಶ್ರಯಿಸಿದ ಮಹಾಭಾಗವತರುಗಳು ಯಾರೆಂಬುವದನ್ನು ತಮ್ಮ ತಮ್ಮ ಸಂಪ್ರದಾಯ ರೀತ್ಯಾ ತಿಳಿದುಕೊಳ್ಳತಕ್ಕದ್ದು. (ಶ್ರೀಭಾಷ್ಯಕಾರರವರಿವಿಗೂ ಆಚಾರ್ಯಪರಂಪರೆಯನ್ನು ಹೇಳಿ ಸುಮ್ಮನಾಗುವದರಭಿಪ್ರಾಯವೇನೆಂದರೆ, ಶ್ರೀಭಾಷ್ಯಕಾರರ ತರುವಾಯ ಆಚಾರ್ಯಪರಂಪರೆಯು ಶಾಖೋಪಶಾಖೆಯಾಗಿಯೂ, ಶಿಷ್ಯರುಗಳು ಅನಂತವಾಗಿಯೂ ಆದುದರಿಂದ ಅವರುಗಳ ವಿಷಯವನ್ನೆಲ್ಲಾ ತಿಳಿಸುವದು ಅಸಾಧ್ಯವಾದುದರಿಂದ ತಮ್ಮ ಗುರುಗಳ ಮುಖೇನ ಯಾರು ಮುಖ್ಯವಾದವರು ಎಂಬುವದನ್ನು ತಿಳಿಯತಕ್ಕದ್ದೆಂದು ಭಾವವು. ಶ್ರೀಭಾಷ್ಯಕಾರರೊಬ್ಬರಿಗೇನೇ

> ರಾಮಾನುಜಸ್ಸಪ್ತಶತೈರ್ಯತೀನಾಂ ಪೀಠೈಶ್ಚತುಸ್ಸಪ್ತತಿಭಿಸ್ಸಮೇತಃ।
> ಏಕಾಂತಿಭಿರ್ದ್ವಾದಶಭಿಸ್ಸಹಸ್ರೈಶ್ಶ್ರೀರಂಗ ಆಸ್ತೇಯತಿ ಸಾರ್ವಭೌಮಃ ॥

ಎಂಬ ಶ್ಲೋಕದಲ್ಲಿ ಹೇಳಿರುವ ಮೇರಿಗೆ ಶಿಷ್ಯರನೇಕರು ; ಅದರಲ್ಲಿ ಸಿಂಹಾಸನಾಧಿಪತಿಗಳೆಂಬದಾಗಿ ೭೪ ಮಂದಿ, ಜೀಯರೆನಿಸುವ ಯತಿಗಳು ೭೦೦, ಏಕಾಂತಿಗಳು ೧೨೦೦೦,ಮಂದಿ, ಶ್ರೀಭಾಷ್ಯ ಸಿಂಹಾಸನಾಧಿಪತಿಗಳು ೪. ಇಷ್ಟು ಮಂದಿ ಶಿಷ್ಯರು ಈ ಯತಿವರ್ಯರೊಬ್ಬರಿಗೇ ಇರುವಲ್ಲಿ, ಅವರವರುಗಳ ಶಿಷ್ಯರು, ಹೀಗೆ ಅವರೆಲ್ಲರ ವೃತ್ತಾಂತವನ್ನು ಹೇಳುವದಸಾಧ್ಯವೆಂಬಭಿಪ್ರಾಯವು.)

**ಮುನಿತ್ರಯರಾದ ಶ್ರೀಮನ್ನಾಥಮುನಿ, ಆಳವಂದಾರ್, ಶ್ರೀಭಾಷ್ಯಕಾರರ ಮತ್ತು ಇತರ ಆಚಾರ್ಯರುಗಳ ಸಂಗ್ರಹವೃತ್ತಾಂತವು.**

1. **ಶ್ರೀಮನ್ನಾಥಮುನಿಗಳು**—ಇವರು ಸೇನೇಶರ ಮಂತ್ರಿಯಾದ ಗಜವಕ್ತ್ರಾಂಶರೆಂದು ಹೇಳುತ್ತಾರೆ. ಕಲಿಯುಗ ೩೬೮೪ನೇ ಶೋಭಕೃದ್ವರ್ಷ, ಆನಿಮಾಸ, ಶುದ್ಧ ತ್ರಯೋದಶೀ ಬುಧವಾರ ಅನೂರಾಧಾ ನಕ್ಷತ್ರದಲ್ಲಿ ಆಳ್ವಾರ್‌ತಿರುನಗರಿ ಸಮೀಪದಲ್ಲಿರುವ ವೀರನಾರಾಯಣ ಪುರದಲ್ಲಿ ಹುಟ್ಟಿದರು. ಇವರ ತಂದೆಯು ಶಠಮರ್ಷಣಗೋತ್ರದಲ್ಲಿ ಹುಟ್ಟಿದ ಈಶ್ವರಮುನಿಗಳು. ಇವರು ಹುಟ್ಟಿದ ಮಗುವಿಗೆ ನಾಥನೆಂದು ನಾಮಕರಣವನ್ನು ಮಾಡಿ, ಮಗುವು ಪ್ರವೃದ್ಧವಾದ ಒಡನೆಯೇ ಸಾಂಗೋಪಾಂಗವಾಗಿ ವೇದಾಧ್ಯಯನ ಮುಂತಾದ ಸರ್ವಶಾಸ್ತ್ರಪ್ರವೀಣತೆಯುನ್ನುಂಟುಮಾಡಿ, ಪ್ರಾಪ್ತವಯಸ್ಕರಾದ ಒಡನೆಯೇ ಅರವಿಂದಪ್ಪಾವಯಾಳ್ ಎಂಬುವ ಕನ್ಯೆಯನ್ನು ತಂದು ವಿವಾಹಮಾಡಿದರು. ಈ ನಾಥಮುನಿಗಳಿಗೆ ಅಲ್ಲಿ ಪ್ರತಿಷ್ಠಿತವಾಗಿದ್ದ ಕಾಟ್ಟುಮನ್ನಾರ್ ಸ್ವಾಮಿಯವರಲ್ಲಿ ನಿಶ್ಚಲವಾದ ಭಕ್ತಿಯುಂಟಾಗಿ ಆತನ ಸೇವೆಯಲ್ಲೇ ನಿರತರಾಗಿ ಯೋಗಾಭ್ಯಾಸವನ್ನು ಮಾಡಿಕೊಂಡಿದ್ದರು. ಸ್ವಲ್ಪಕಾಲ ಕಳೆದನಂತರ ಇವರಿಗೆ ಈಶ್ವರಭಟ್ಟಾಳ್ವಾರ್ ಎಂಬುವ ಕುಮಾರರು ಜನಿಸಿದರು. ಈ ಕುಮಾರರಿಗೆ ತಾವು ಪಡೆದರೀತಿಯಲ್ಲೇ ಸರಿಯಾದ ವಯಸ್ಸು ಪ್ರಾಪ್ತವಾದ ಒಡನೆಯೇ ಸರ್ವಶಾಸ್ತ್ರಪಾರಂಗತೆಯುನ್ನುಂಟುಮಾಡಿದುದಲ್ಲದೆ ತಮ್ಮ ಹಾಗೆಯೇ ಯೋಗಾಭ್ಯಾಸ ಉಪದೇಶವನ್ನೂ ಮಾಡಿದರು. ಅನಂತರ ತೀರ್ಥಯಾತ್ರೆಮಾಡಬೇಕೆಂಬ ಕುತೂಹಲ ಉಂಟಾದುದರಿಂದ ಸಪತ್ನೀಕರಾಗಿ ಹೊರಟು ಅನೇಕ ದಿವ್ಯದೇಶಯಾತ್ರೆಗಳನ್ನು ಮಾಡುತ್ತಾ ಕಡೆಗೆ ಯಮುನಾತೀರದಲ್ಲಿರುವ ಗೋವರ್ಧನಪುರವನ್ನು ಸೇರಿ, ಅಲ್ಲಿ ನೆಲಸಿರುವ ಸ್ವಾಮಿಯನ್ನು ಸೇವಿಸುತ್ತಾ ಅಲ್ಲಿಯೇ ನಿಂತುಬಿಟ್ಟರು. ಆಗ ಒಂದು ದಿನ ಸ್ವಪ್ನದಲ್ಲಿ ಕಾಟ್ಟುಮನ್ನಾರ್‌ಸ್ವಾಮಿಯು ಎದುರಿಗೆ ಬಂದು ನಿಂತು, "ಏನು, ವೀರನಾರಾಯಣಪುರಿಗೆ ಬರುವಹಾಗಿಲ್ಲವೋ" ಎಂದು ನೇಮನವಾಗಲು, ಒಡನೆ ಗೋವರ್ಧನಪುರಿಸ್ವಾಮಿಯಾದ ಯಮುನೈತ್ತುರೈವರೈಯ ವರ

ನಿಯಮನವನ್ನು ಹೊಂದಿದವರಾಗಿ ಹಿಂತುರುಗಿ ವಾರಾಣಸೀ, ಜಗನ್ನಾಥ, ಸಿಂಹಾದ್ರಿ, ತಿರುಪತಿ, ಘಟಿಕಾಚಲ, ಕಾಂಚೀ, ಶ್ರೀರಂಗಾದಿ ದಿವ್ಯದೇಶಯಾತ್ರೆಗಳನ್ನು ಮಾಡಿಕೊಂಡು ಪುನಃ ವೀರನಾರಾಯಣಪುರಕ್ಕೆ ಸೇರಿ ಮನ್ನನಾರನ್ನು ಸೇವಿಸುತ್ತ ಯೋಗನಿಷ್ಠರಾಗಿದ್ದರು.

ಹೀಗಿರುವಲ್ಲಿ ಒಂದುದಿನ ಕೆಲವು ಶ್ರೀವೈಷ್ಣವರುಗಳು ಆಳ್ವಾರುತಿರುನಗರಿಯಿಂದ ಬಂದು ಮನ್ನನಾರನ್ನು ಸೇವಿಸುವಾಗ, ನಮ್ಮಾಳ್ವಾರ್ರವರಿಂದ ಅನುಗ್ರಹಿಸಲ್ಪಟ್ಟ "ಆರಾವಮುದೇ" ಎಂಬ ತಿರುಕ್ಕೂಡಂದೆ (ಕುಂಭಘೋಣ) ಯ ಆರಾವಮುದ ಸ್ವಾಮಿಯ ವಿಷಯದಲ್ಲಿ ಹೇಳಿದ ತಿರುವಾಯ್‌ಮೊಳಿ ಕೇಳಿ, ಪರಮಭೋಗ್ಯವಾದ ಅದರ ಅಮೋಘಾರ್ಥಕ್ಕೆ ಪರವಶರಾಗಿ, ಆ ೧೧ ಪಾಶುರಗಳನ್ನೂ ತಾವು ಸಂಗ್ರಹಿಸಿದವರಾಗಿ, ನಮ್ಮಾಳ್ವಾರ್ರವರು ಅನುಗ್ರಹಿಸಿದುದು ಸಾವಿರ ಪಾಶುರಗಳೆಂದು ತಿಳಿದು ಅವುಗಳನ್ನೆಲ್ಲಾ ತಮಗೂ ಅನುಗ್ರಹಿಸಬೇಕೆಂದು ದೈನ್ಯದಿಂದ ಪ್ರಾರ್ಥಿಸಲು, ಅದಕ್ಕವರು ನಾವು ತಿರುನಗರಿಬಿಟ್ಟು ಬಹಳದಿನಗಳಾಗಿ, ತಿರುಕ್ಕುಡಂದೆಯಲ್ಲೇ ನಿಂತುಬಿಟ್ಟವಾದುದರಿಂದ ನಮಗೆ ತಿಳಿಯದು ಎಂದು ಅರಿಕೆಮಾಡಲು, ಅಲ್ಲಿಂದ ಆ ಸಾವಿರ ಪಾಶುರಗಳನ್ನೂ ಸಂಗ್ರಹಿಸಬೇಕೆಂಬ ಆಶೆಯಿಂದ ಮನ್ನನಾರ್ (ಶ್ರೀರಾಜಗೋಪಾಲಸ್ವಾಮಿ)ನಿಯಮನವನ್ನು ಪಡೆದು, ತಿರುಕ್ಕೂಡಂದೆಯ "ಆರಾವಮುದನನ್ನು (ಶಾರ್ಙ್ಗಪಾಣಿ)"ಸೇವಿಸಿ ಯಾರನ್ನು ಅಲ್ಲಿ ಕೇಳಿದರೂ ಆ ಸಾವಿರ ಪಾಶುರಗಳು ನಮಗೆ ತಿಳಿಯದು ಎಂದು ಹೇಳಿದುದರಿಂದ ಅಲ್ಲಿಂದ ಆಳ್ವಾರುತಿರುನಗರಿಗೆ ಬಂದು ವಿಚಾರಮಾಡಿದರೂ ಯಾರೊಬ್ಬ ಭಾಗವತರೂ ತಿಳಿಸದೇ ಹೋದುದರಿಂದ,ಕಡೆಗೆ ಪರಾಂಕುಶದಾಸರೆಂಬುವರನ್ನು ಕಂಡು ಪ್ರಶ್ನಿಸಲು, ಅದಕ್ಕವರು ತಿರುವಾಯ್‌ಮೊಳಿಯ ಅಲ್ಪಸ್ವಲ್ಪ ಭಾಗಮಾತ್ರ ಜನರಿಗೆ ತಿಳಿಯುವುದೇ ವಿನಾ ತಿರುವಾಯ್‌ಮೊಳಿ ಮಿಕ್ಕಭಾಗವೆಲ್ಲಾ ಕ್ಷೀಣವಾಗಿ ಹೋಯಿತೆಂಬದಾಗಿಯೂ, ಮಧುರಕವಿ ಆಳ್ವಾರವರು ಅನುಗ್ರಹಿಸಿದ "ಕಣ್ಣಿನುಣ್‌ಶಿರತ್ತಾಂ"ಬೆಂಬುವ ೧೧ ಪಾಶುರಗಳನ್ನು ೧೨,೦೦೦ ಸಲ ಭಕ್ತಿಯಿಂದ ಪಠನಮಾಡಿದ್ದಾದರೆ ನಮ್ಮಾಳ್ವಾರವರು ಪ್ರತ್ಯಕ್ಷವಾಗುತ್ತಾರೆ. ಆಗ ತಿರುವಾ

ಯ್‌ಮೊಳಿ ಉಪದೇಶವನ್ನು ಹೊಂದಬಹುದೆಂಬದಾಗಿ ಹೇಳಲು; ಅದಕ್ಕೆ ತುಂಬಾ ಸಂತುಷ್ಟರಾಗಿ ಹಾಗೆಯೇ ನಡಿಸಲು, ಮಧುರಕವಿ ಆಳ್ವಾರ್ರವರು ಪ್ರತ್ಯಕ್ಷವಾಗಿ ತಿರುಮಂತ್ರಾರ್ಥ, ವ್ಯಾಸಸೂತ್ರ, ತಿರುವಾಯ್‌ಮೊಳಿ ಮೊದಲಾದ ದಿವ್ಯ ಪ್ರಬಂಧಗಳನ್ನೂ, ಅವುಗಳರ್ಥಗಳನ್ನೂ ಸಹ ಉಪದೇಶಿಸಲು, ಅವುಗಳನ್ನು ಮನನಮಾಡಿ, ಸಂಗ್ರಹಿಸಿಕ್ಕೊಂಡು ಈ ನಾಥಮುನಿಗಳು ಕೃತಾರ್ಥರಾಗಿದ್ದರು.

ಹೀಗಿರುವಲ್ಲಿ ಈ ವಿಷಯುವನ್ನೆಲ್ಲಾ ತಿಳಿದು ಕೆಲವು ಶ್ರೀವೈಷ್ಣವರು ನಾಥಮುನಿಗಳನ್ನು ಕಂಡು ಧನ್ಯರಾಗಿ ತಮ್ಮ ವಿಜ್ಞಾಪನೆಯನ್ನು ಅರಿಕೆ ಮಾಡಿಕ್ಕೊಂಡರೇನೆಂದರೆ—ಶ್ರೀರಂಗಕ್ಷೇತ್ರವನ್ನೆಲ್ಲಾ ಶ್ರೀತಿರುಮಂಗೈ ಆಳ್ವಾರವರು ಜೀರ್ಣೋದ್ಧಾರಮಾಡಿ ಗೋಪುರಾದಿಗಳನ್ನು ಕಟ್ಟಿ ಶ್ರೀಪರಮಪದವಾಸರನ್ನು ಪ್ರತಿಷ್ಠೆಮಾಡಿ ಉತ್ಸವಾದಿಗಳೆಲ್ಲಾ ಪರಮಸಂಭ್ರಮದಿಂದ ಜರುಗುವಹಾಗೆ ಏರ್ಪಾಡುಮಾಡುವದರಲ್ಲಿ, ಆಳ್ವಾರ್‌ತಿರುನಗರಿಯಿಂದ ನಮ್ಮಾಳ್ವಾರವರನ್ನು ಬಿಜಮಾಡಿಸಿಕೊಂಡುಬಂದು ಮಾರ್ಹಳಿ ಶುದ್ಧ ಏಕಾದಶೀ ಸಮಯದಲ್ಲಿ ವೇದಪಾರಾಯಣ ಮತ್ತು ನಾಲಾಯಿರ ದ್ರಾಮಿಡಪ್ರಬಂಧಸೇವೆಯನ್ನು ಏರ್ಪಡಿಸಿ, ಅದಕ್ಕೆ ತಿರುವಧ್ಯಯನೋತ್ಸವವೆಂಬ ಹೆಸರನ್ನು ಕೊಟ್ಟು ನಡಿಸುತ್ತಿದ್ದರೆಂದೂ, ಅದು ಈಚಿಗೆ ತಿರುವಾಯ್‌ಮೊಳಿಪ್ರವಚನವಿಲ್ಲದೆ ಎಲ್ಲಾ ಮರೆತುಹೋಗಿ ನಿಂತುಹೋಗಿದೆ ಎಂಬದಾಗಿಯೂ ಅಂತಹ ಸಂಪ್ರದಾಯವು ಪುನಃ ಏರ್ಪಡಿಸಿದರೆ ಈ ದಿವ್ಯಪ್ರಬಂಧಕ್ಕೆ ತುಂಬಾ ಉತ್ತೇಜನ ಕೊಟ್ಟ ಹಾಗೆ ಆಗುತ್ತದೆಂಬದಾಗಿಯೂ ಅವರು ವಿಜ್ಞಾಪಿಸಿದುದರಿಂದ ಇದು ತುಂಬಾ ಅಮೋಘಕೈಂಕರ್ಯವು, ಇಂತಹ ಸೇವೆಯನ್ನು ಪುನಃ ಏರ್ಪಾಡುಮಾಡಬೇಕೆಂದು ಸಂಕಲ್ಪಿಸಿದವರಾಗಿ ಶ್ರೀಮನ್ನಾಥಮುನಿಗಳು ಆಳ್ವಾರ್ ತಿರುನಗರಿಯಿಂದ ನಮ್ಮಾಳ್ವಾರವರನ್ನು ಬಿಜಮಾಡಿಸಿಕೊಂಡು ಬಂದು ಶ್ರೀರಂಗಕ್ಷೇತ್ರದಲ್ಲಿ ಪ್ರಥಮೈಕಾದಶೀ ಮೊದಲು ಹತ್ತು ದಿನಗಳಲ್ಲಿ ೨೦೦೦ ದಿವ್ಯಪ್ರಬಂಧಗಳನ್ನೂ, ಏಕಾದಶೀ ಮೊದಲು ಹತ್ತು ದಿನಗಳಲ್ಲಿ ತಿರುವಾಯಿಮೊಳಿಯ ೧೦೦೦ ಪ್ರಬಂಧಗಳನ್ನೂ. ಇನ್ನೊಂದು ಸಾವಿರವನ್ನು ಇನ್ನೊಂದು ದಿನದಲ್ಲೂ ಸೇವೆನಡೆಯು

ವಹಾಗೆ ಮಾಡಿದರು. ಈ ಸೇವೆಯು ಈಗಲೂ ನಡೆಯುತ್ತಲಿದೆ. ಆದರೆ ಕೆಲವು ಮಹನೀಯರು ಈ ಅಧ್ಯಯನೋತ್ಸವದಲ್ಲಿ ಎಲ್ಲಾ ಆಳ್ವಾರುಗಳಿಗೂ ಉತ್ಸವನಡೆದರೂ, ನಾಥಮುನಿಗಳು ಈ ಉತ್ಸವ ನಡೆಯಲು ಮೂಲಕಾರಣವಾದರೂ ಅವರಿಗೆ ಮಾತ್ರ (ಹಾಗೆಯೇ ವೇದಾಂತದೇಶಿಕರಿಗೂ) ಉತ್ಸವವಿಲ್ಲದೆ ಮಾಡಿರುವದು ಶೋಚನೀಯವಾದ ವಿಷಯವಾಗಿದೆ.

ಅನಂತರ ನಾಥಮುನಿಗಳು ಪುನಃ ತಿರುಕ್ಕಡಂದೆಗೆ ದಯಮಾಡಿಸಿದವರಾಗಿ ಅಲ್ಲಿ ನಮ್ಮಾಳ್ವಾರವರನ್ನು ಪ್ರತಿಷ್ಠೆಮಾಡಿ ಅಲ್ಲಿಯೂ ಇದೇ ಪ್ರಕಾರ ಅಧ್ಯಯನೋತ್ಸವ ಜರುಗುವಹಾಗೆ ಮಾಡಿದರು.

ಇಂತಹ ಅಮೋಘ ಕೆಲಸಗಳನ್ನೆಲ್ಲಾ ಶ್ರೀಮನ್ನಾರ್ ಮಹಾಕೃಪೆಯಿಂದ ಆತನೇ ತಮ್ಮ ಮೂಲಕ ನಡಿಸಿಕೊಂಡನಲ್ಲಾ ಎಂದು ಧನ್ಯರಾಗಿ ಪುನಃ ವೀರನಾರಾಯಣಪುರಿಗೆ ಹೋಗಿ ಸ್ವಾಮಿಯ ತುಳಸೀಮಾಲಾಕೈಂಕರ್ಯನಿರತರಾಗಿ, ಯೋಗಾಭ್ಯಾಸವನ್ನು ಮಾಡುತ್ತಾ ತಮ್ಮ ಸೋದರಳಿಯಂದಿರಾದ ಕೀಳೈಯಹತ್ತಾಳ್ವಾ‌ರ್, ಮೇಲೈಯಹತ್ತಾಳ್ವಾರ್ ಎಂಬ ಶಿಷ್ಯರಿಗೆ ದಿವ್ಯಪ್ರಬಂಧಗಳನ್ನು ದಿವ್ಯಗಾನರೂಪದಲ್ಲಿ ಉಪದೇಶಿಸುತ್ತಾ ಒಬ್ಬರನ್ನು ಶ್ರೀರಂಗಕ್ಕೂ ಇನ್ನೊಬ್ಬರನ್ನು ತಿರುಕ್ಕಡಂದೆಗೂ ಹೋಗಿ ಅರೈಯರ್ ಎಂಬ ಹೆಸರಿನಿಂದ ಗಾನಮಾಡುವ ಹಾಗೆ ಮಾಡಿ ದಿವ್ಯಪ್ರಬಂಧಗಳಿಗೆ ಪೂರ್ಣ ಉತ್ತೇಜನವನ್ನು ಈ ಆಚಾರ್ಯರು ಕೊಟ್ಟರು. ಆದುದರಿಂದ ಆಚಾರ್ಯರುಗಳಲ್ಲಿ ಇವರೇ ಪ್ರಥಮರೆಂದು ಭಾವಿಸತಕ್ಕದ್ದು.

ಈ ದೇವಗಾನದಲ್ಲಿ ಪ್ರಸಿದ್ಧಳಾದ ಒಬ್ಬ ದಾಸಿಯೂ, ಮನುಷ್ಯಗಾನದಲ್ಲಿ ಪ್ರವೀಣಳಾದ ಒಬ್ಬ ದಾಸಿಯೂ ಅಲ್ಲಿದ್ದ ಚೋಳರಾಜನ ಸಭೆಗೆ ಹೋಗಿ ಇಬ್ಬರೂ ಹಾಡಲು, ಆ ರಾಜನು ದೇವಗಾನಮಾಹಾತ್ಮ್ಯೆಯನ್ನರಿಯದವನಾದ ಪ್ರಯುಕ್ತ, ಮನುಷ್ಯಗಾನವಿಶಾರದಳಿಗೇನೇ ಬಹುಮಾನಮಾಡಲಾಗಿ, ದೇವಗಾನಶಿರೋಮಣಿಯು ಶ್ರೀಮನ್ನಾಥಮುನಿಗಳಲ್ಲಿಗೆ ಹೋಗಿ ಈ ವಿವರವನ್ನು ತಿಳಿಸಿ, ಕಡೆಗೆ ನಾಥಮುನಿಗಳು ಆ ರಾಜನಿಗೆ ದೇವಗಾನಮಾಹಾತ್ಮ್ಯೆಯನ್ನು ಒಂದು

ಶಿಲಾಸ್ತಂಭದಲ್ಲಿ ಪ್ರತಿಷ್ಠಿತವಾದ ತಾಳದಮೂಲಕ ತೋರಿ, ತಾಳಗಳ ನಾದದಿಂದ ಈ ದೇವಗಾನಮೂಲಕ ತಾಳಗಳ ತೂಕವನ್ನು ಹೇಳಬಹುದೆಂದು ತಿಳಿಸಿ, ರಾಜನಿಂದ ತರಲ್ಪಟ್ಟ ೩೪೦ ತಾಳಗಳ ತೂಕವನ್ನು ಸರಿಯಾಗಿ ಹೇಳಿದವರಾಗಿ, ಆ ದೇವಗಾನದಾಸಿಗೆ ಮರ್ಯಾದೆ ಮಾಡುವಹಾಗೆ ಮಾಡಿ, ಆತನಿಂದ ತಾವೂ ಪೂಜಿತರಾಗಿ, ವೈಷ್ಣವ ಸಿದ್ಧಾಂತಸ್ಥಾಪನಮಾಡಿ ಆ ರಾಜನು ಕೊಟ್ಟ ದ್ರವ್ಯಮುಂತಾದವುಗಳನ್ನು ಐಹಿಕಾಪೇಕ್ಷೆಯಿಲ್ಲದವರಾದ ಪ್ರಯುಕ್ತ ತೊರದು ಪುನಃ ವೀರನಾರಾಯಣಪುರಿಗೆ ಹೋಗಿ ಶ್ರೀಮನ್ನಾರ್ ಕೈಂಕರ್ಯದಲ್ಲೇ ನಿರತರಾಗಿದ್ದರು. ಇವರು ಮಾಡುತ್ತಿದ್ದ ಯೋಗಾಭ್ಯಾಸಮಹಿಮೆಯಿಂದ ೩೩೦ ವರುಷಗಳು ಜೀವಂತರಾಗಿದ್ದರೆಂದೂ, ತಮ್ಮ ಮಕ್ಕಳಾದ ಈಶ್ವರಭಟ್ಟಾಳ್ವಾರಿಗೆ ಕುಮಾರರಾದ ಆಳುವಂದಾರ್ರವರು ೮ ವರುಷದವರಾಗಿ ಬೆಳೆಯುವವರಿವಿಗೂ ಬದುಕಿದ್ದು ಅನಂತರ ಪರಮಪದವನ್ನು ಹೊಂದಿದರೆಂದೂ ಹೇಳುತ್ತಾರೆ. ಇವರ ದೇಹಾವಸಾನಪೂರ್ವಭಾವಿಯಾಗಿ ಒಂದು ಇತಿಹಾಸವೂ ಉಂಟು. ಒಂದುದಿನ ಎಂದಿನಂತೆ ಕಾವೇರೀನದಿಗೆ ಸ್ನಾನಾಹ್ನಿಕಕ್ಕಾಗಿ ಶ್ರೀಮನ್ನಾಥಮುನಿಗಳು ದಯಮಾಡಿಸಿ ಮನೆಗೆ ಬರಲು, ಅವರ ಹೆಣ್ಣುಮಕ್ಕಳು ತಂದೆಯನ್ನು ಕುರಿತು " ನೀವು ಸ್ನಾನಕ್ಕೆ ಹೋಗಿರುವ ಕಾಲದಲ್ಲಿ ಇಬ್ಬರು ಸುಂದರರಾದ ಧನುರ್ಧಾರಿಗಳೂ ಒಬ್ಬ ಹೆಂಗಸೂ ಒಬ್ಬ ವಾನರನೂ ಸಹ ಬಂದು ತಮ್ಮನ್ನು ಕೇಳಿದರು, ಸ್ನಾನಕ್ಕೆ ಕಾವೇರೀನದಿಗೆ ಹೋಗಿರುವದಾಗಿ ತಿಳಿಸಿದೆವು. ಅನಂತರ ಅವರುಗಳು ಹೊರಟುಹೋದರು " ಎಂದು ತಿಳಿಸಲು, ಅದಕ್ಕೆ ನಾಥಮುನಿಗಳು ತುಂಬಾ ಪರಿತಾಪಗೊಂಡು, ನಿಮಗುಂಟಾದ ಸುಕೃತವು ನನಗಿಲ್ಲವಾಯಿತೇ ಎಂದು ಹೇಳಿ, ಯಾವ ಕಡೆಗೆ ಅವರು ತೆರಳಿದರು ಎಂದು ಪ್ರಶ್ನಿಸಲು, ಅದಕ್ಕಾ ಕುಮಾರ್ತಿಯರು ದಕ್ಷಿಣದಿಕ್ಕನ್ನನುಸರಿಸಿ ಪ್ರಯಾಣಮಾಡಿದರೆಂದು ಅರಿಕೆಮಾಡಲು, ಒಡನೇ ಮುನಿಗಳು ಆ ದಿಕ್ಕನ್ನು ಹಿಡಿದು ತೆರಳಿದವರಾಗಿ ಎಲ್ಲೂ ಅವರುಗಳು ಸಿಕ್ಕದೆ ಶೋಕಾರ್ತರಾಗಿರುವಾಗ, ಶ್ರೀರಾಮನು ಸೀತಾಲಕ್ಷ್ಮಣಾಂಜನೇಯರೊಡನೆ ಇವರಿಗೆ ಸೇವೆಯನ್ನಿತ್ತು, ಅದರಿಂದಿವರು ಧನ್ಯರಾಗಿ ಪರಮ

ಪನವನ್ನು ಸಾರಿದರು. ಇವರು ಅನುಗ್ರಹಿಸಿದ ಗ್ರಂಥಗಳು—1. ನ್ಯಾಯತತ್ತ್ವ, 2. ಯೋಗರಹಸ್ಯವೆಂದು ಮೂಲದಲ್ಲೇ ಹೇಳಲ್ಪಟ್ಟಿವೆ. ಹಾಗೆಯೇ ಇವರ ಎಂಟು ಮಂದಿ ಶಿಷ್ಯರುಗಳ ಹೆಸರೂ ಕೂಡ ಸೂಚಿಸಲ್ಪಟ್ಟಿವೆ. ಅವರುಗಳಲ್ಲಿ ಮುಖ್ಯರು:—

2. ಉಯ್ಯಕ್ಕೊಂಡಾರ್ ಅಥವಾ ಪುಂಡರೀಕಾಕ್ಷರು. ಇವರು ಕಲಿ ೩೯೨೭ನೇ ಪರಾಭವ ಸಂವತ್ಸರ, ಚಿತ್ತಿರೈಮಾಸ, ಶುಕ್ಲಪಕ್ಷ ಪ್ರಥಮೆ ಬುಧವಾರ, ಕೃತ್ತಿಕಾನಕ್ಷತ್ರ ಈ ಶುಭದಿನದಲ್ಲಿ ತಿರುವೆಳ್ಳರೆಯಲ್ಲಿ ಹುಟ್ಟಿದರು. ಇವರು ಶ್ರೀಮನ್ನಾಥಮುನಿಗಳಿಂದ ಮಂತ್ರೋಪದೇಶ, ರಹಸ್ಯಾರ್ಥಗಳು, ದ್ರಾವಿಡಪ್ರಬಂಧ ಮೊದಲಾದವುಗಳನ್ನೆಲ್ಲಾ ಸಂಗ್ರಹಿಸಿದರು. ಇವರಿಗೆ ಉಯ್ಯಕ್ಕೊಂಡಾರ್ ಎಂಬ ಹೆಸರು ಶ್ರೀಮನ್ನಾಥಮುನಿಗಳು ಅನುಗ್ರಹಿಸಿದ್ದು. ಸರಿಯಾದ ಹೆಸರು "ಉಯ್ಯಕೊಂಡೀರ್" ಅಂದರೆ ಉಜ್ಜೀವಿಸುವ ಹಾಗೆ ಮಾಡಿದಿರಿ. ಆಚಾರ್ಯನಾದ ನನ್ನನ್ನು ಉಜ್ಜೀವಿಸುವಹಾಗೆ ಮಾಡಿದಿರಿ ಅಂದರೆ ಆಚಾರ್ಯಮರ್ಯಾದೆ ಅಥವಾ ಮಹಿಮೆಯನ್ನು ಕಾಪಾಡಿದಿರಿ ಎಂದು ಭಾವವು. ಹೇಗೆಂದರೆ—ಈ ನಾಥಮುನಿಗಳ ಅತ್ತೆಯಾದ ವಂಗಿಪುರದ ಆಚ್ಚಿ ಎಂಬುವರು ತಮ್ಮ ಮಗಳಾದ ಮತ್ತು ನಾಥಮುನಿಗಳ ಪತ್ನಿಯಾದ ಅರವಿಂದಪಾವೈಯುಳನ್ನು ಕರೆದುಕೊಂಡು ಬರಹೇಳಿ ಕಳುಹಿಸಲು, ಆಗ ನಾಥಮುನಿಗಳು ಈ ಪುಂಡರೀಕಾಕ್ಷರನನ್ನು ಜೊತೆಮಾಡಿ ಕಳುಹಿಸಿಕೊಡಲು, ಗುರುಪತ್ನಿಯನ್ನು ತವರುಮನೆಯಲ್ಲಿ ಬಿಟ್ಟು ಅಚ್ಚಿಯವರನುಜ್ಞೆಯನ್ನು ಈ ಪುಂಡರೀಕಾಕ್ಷರು ಪ್ರಾರ್ಥಿಸಲಾಗಿ ಊಟವನ್ನು ತೀರಿಸಿಕ್ಕೊಂಡು ಹೋಗಬಹುದೆಂದು ಹೇಳಿದ್ದರಿಂದ ಒಪ್ಪಿನಿಂತರು. ಇವರು ಊರ್ಧ್ವಶಿಖೆಯುಳ್ಳವರಾದುದರಿಂದ ಇವರಿಗೆ ಆ ಆಚ್ಚಿಯವರು ಮುಂದಿನ ಪಡಸಾಲೆಯಲ್ಲಿ ಮೊದಲು ದಿನ ಮಿಕ್ಕ ನೀರಿನಲ್ಲಿ ಹಾಕಿದ್ದ ಅನ್ನವನ್ನು ಬಡಿಸಲು, ಅದಕ್ಕೆ ಸ್ವಲ್ಪವೂ ಅತೃಪ್ತಿ ತೋರಿಸದೆ ಸಂತೋಷದಿಂದ ಭುಂಜಿಸಿ ಹಿಂತಿರುಗಿ ಬಂದು ತಮ್ಮ ಗುರುಸಾನ್ನಿಧ್ಯವನ್ನು ಸೇರಿದರು. ಆಗ ಶ್ರೀಮನ್ನಾಥಮುನಿಗಳು ತಮ್ಮ ಶಿಷ್ಯರನ್ನು ಕುರಿತು ಏನು ಮರ್ಯಾದೆಯು ಅಲ್ಲಿ ನಡೆಯಿತು ಎಂದು ಪ್ರಶ್ನಿಸಲು

ಆಗ ಅವರು " ತದುಚ್ಛಿಷ್ಟಂಸು ಪಾವನಂ " ಎಂಬಂತೆ ತಮಗೆ ನೀರಿನಲ್ಲಿ ಹಾಕಿದ ಹಿಂದಿನ ದಿನದ ಅನ್ನವು ಗುರುಪತ್ನಿ ಅನುಗ್ರಹದಿಂದ ಸಿಕ್ಕಿದುದು ಪರಮಲಾಭವೆಂದು ಬಿನ್ನಹಿಸಲು, ಅದಕ್ಕೆ ಶ್ರೀನಾಥಮುನಿಗಳು ಪರಮಸಂತುಷ್ಟರಾಗಿ ತಮ್ಮ ತಿರುವಡಿಯನ್ನವರಿಗೆ ಅನುಗ್ರಹಿಸಿ ಗುರುಮಹಾತ್ಮ್ಯೆಯನ್ನು " ಉಯ್ಯಕೊಂಡೀ" ರಾದುದರಿಂದ "ಉಯ್ಯಕೊಂಡಾರ್" ಎಂಬ ಹೆಸರನ್ನು ಕೊಟ್ಟರು. ಈ ವಿಷಯವೆಲ್ಲಾ ವಂಗಿಪುರ ಆಚ್ಚಿಯವರಿಗೆ ತಿಳಿದುದರಿಂದ, ಅವರು ತಮ್ಮ ಮಗಳನ್ನು ತಂದು ಶ್ರೀಮನ್ನಾಥಮುನಿಗಳಲ್ಲಿ ಸಮರ್ಪಿಸಿ, ಇಂತಹ ಬ್ರಹ್ಮವಿತ್ತಾದ ಶ್ರೀಮನ್ನಾಥಮುನಿಗಳಿಗೆ ತಾನು ಕನ್ಯಾದಾನಮಾಡಿಕೊಟ್ಟದ್ದರಿಂದ ತಮ್ಮಗಳ ವಂಶವೆಲ್ಲ ಪಾವನವಾಯಿತೆಂದು ಸಂತೋಷಯುಕ್ತರಾಗಿ, ಅಂತಹ ಭಾಗವತಶಿಖಾಮಣಿಯಾದ ಪುಂಡರೀಕಾಕ್ಷರಿಗೆ ತಾನು ಪಡಸಾಲೆಯಲ್ಲಿ ಹಳಿಸಿದನ್ನವನ್ನು ಹಾಕಿದ್ದಕ್ಕಾಗಿ ಅವರ ಕ್ಷಮಾಪಣೆಯನ್ನು ಪ್ರಾರ್ಥಿಸಿ ತಮ್ಮ ಸ್ಥಳಕ್ಕೆ ತೆರಳಿದರು.

ಈ ನಾಥಮುನಿಗಳ ವಿಷಯದಲ್ಲಿ ಇನ್ನೊಂದು ಕಥೆಯನ್ನು ಹೇಳುತ್ತಾರೆ. ಇವರೂ ಕುರುಹೈಕಾವಲ್ಲಪ್ಪರ್ ಮೊದಲಾದ ಶಿಷ್ಯರುಗಳು ಶ್ರೀಮನ್ನಾಥಮುನಿಗಳ ಸನ್ನಿಧಿಯಲ್ಲಿ ವೇದಾಂತಶಾಸ್ತ್ರಕಾಲಕ್ಷೇಪದಲ್ಲಿರುವಾಗ, ಅಲ್ಲಿಗೆ ಒಬ್ಬರಾಜನೂ ಆತನ ಹೆಂಡರೂ ಸಹ ಶ್ರೀಮನ್ನಾಥಮುನಿಗಳ ಮಾಹಾತ್ಮ್ಯೆಯನ್ನು ಕೇಳಿದವರಾಗಿ ಬಂದು ಅವರ ಸೇವೆಯನ್ನು ಮಾಡಿ ಹೊರಟುಹೋದರು. ಅವರನ್ನೇ ಇವರು ಶ್ರೀಕೃಷ್ಣಗೋಪಿಯರೆಂದು ಭಾವಿಸಿ ಅವರನ್ನು ಹಿಂಬಾಲಿಸಿ ಹುಡುಕಿಕೊಂಡು ಹೋಗಲು, ಅವರುಗಳು ಸಿಕ್ಕದುದರಿಂದ ತಾವು ಮಾಡುತ್ತಿದ್ದ ಉಪಾಸನ, ಪ್ರವಚನಾದಿಗಳನ್ನೆಲ್ಲಾ ಬಿಟ್ಟುಬಿಟ್ಟದುದನ್ನು ಈ ಶಿಷ್ಯರು ಕಂಡು ಬ್ರಹ್ಮಜ್ಞಾನವೆಂಬಗ್ನಿಯಿಂದ ಸರ್ವವಿಧ ಕೈಂಕರ್ಯಗಳು ದಗ್ಧವಾಗಿರುವಹಾಗೆ ತೋರುತ್ತದೆ ಎಂಬದಾಗಿ ತಮ್ಮ ಗುರುವಿನಲ್ಲರಿಕೆಮಾಡಲು, ತಾವು ನಡಿಸಿದುದು ಸರಿಯಲ್ಲವು, ಭಗವದ್ಭಾಗವತ ಕೈಂಕರ್ಯವೇ ತಮ್ಮ ಸಿದ್ಧಾಂತರೀತ್ಯಾ ಪರಮಪುರುಷಾರ್ಥವಾದುದರಿಂದ, ಇದೇ ಸರಿಯಾದ ಮಾರ್ಗವೆಂದೆನಿಸಿ ಶ್ರೀಮನ್ನಾಥಮುನಿಗಳು ಹಿಂತಿರುಗಿ

ಬಂದು ವೀರನಾರಾಯಣಪುರ ಸೇರಿ ಭಗವದ್ಭಾಗವತ ಕೈಂಕರ್ಯದಲ್ಲಿ ನಿರತರಾಗಿ ಶಿಷ್ಯರಿಗೆ ವೇದಾಂತಶಾಸ್ತ್ರಕಾಲಕ್ಷೇಪವನ್ನು ನಡಿಸುತ್ತಾ ಕಾಲಯಾಪನೆಮಾಡತೊಡಗಿದರು ಈ ಉಯ್ಯಕೊಂಡಾರರ ಐದು ಶಿಷ್ಯರುಗಳ ಹೆಸರೂ ಮೂಲದಲ್ಲಿ ಕಾಣಿಸಲ್ಪಟ್ಟವೆ. ಅವರುಗಳಲ್ಲಿ ಮುಖ್ಯರಾದವರು ಆಳವಂದಾರ್ರವರಿಗೆ ಗುರುಗಳಾದ

**ಮಣಕ್ಕಾಲ್‌ನಂಬಿ** (ಶ್ರೀರಾಮಮಿಶ್ರರು). ಇವರು ಕಲಿ ೩೯೩೩ ನೇ ವಿರೋಧಿಕೃದ್ವರ್ಷಮಾಶಿಮಾಸ ಶುಕ್ಲಪಕ್ಷ ಚತುರ್ದಶೀ ಸೋಮವಾರ ಮಖಾನಕ್ಷತ್ರದಲ್ಲಿ ಮಣಕ್ಕಾಲ್ ಎಂಬುವ ಅಗ್ರಹಾರದಲ್ಲಿ ಜನಿಸಿದರು. ಇವರು ಉಯ್ಯಕೊಂಡಾರ್ರವರ ಶಿಷ್ಯರಾಗಿ ಸರ್ವಶಾಸ್ತ್ರಾರ್ಥ ರಹಸ್ಯಾರ್ಥಗಳನ್ನು ಸಂಗ್ರಹಿಸಿಕೊಂಡು ಆಚಾರ್ಯ ಕೈಂಕರ್ಯದಲ್ಲೇ ಆಸಕ್ತಿಯುಳ್ಳವರಾಗಿದ್ದರು. ಉಯ್ಯಕೊಂಡಾರ್ರವರ ಪತ್ನಿಯದೇಹಾವಸಾನಾನಂತರ ತಮ್ಮ ಆಚಾರ್ಯರಿಗೆ ಮಹಾನಸ ಕೈಂಕರ್ಯವನ್ನೂ ಕೂಡಾ ಮಾಡಿದರೆಂಬ ವೃತ್ತಾಂತವಿರುತ್ತದೆ.

ಒಂದು ದಿನ ಆ ಊರಿನ ಹೆಣ್ಣುಮಕ್ಕಳೆಲ್ಲಾ ವಿನೋದವಾಗಿ ಮನೆಯಿಂದ ದಧ್ಯನ್ನ ಮೊದಲಾದವುಗಳನ್ನು ಕಟ್ಟಿಕೊಂಡು ಹೋಗಿ ಕಾವೇರೀನದಿಯಲ್ಲಿ ಎಲ್ಲರೂ ಸೇರಿ ಊಟಮಾಡಲು ತೊಡಗಿದರು. ಆ ಉಯ್ಯಕೊಂಡಾರವರ ಇಬ್ಬರೂಮಕ್ಕಳೂ ಸಹ ಅಲ್ಲಿಗೆ ಹೋಗಿದ್ದವರು ಹಿಂತಿರುಗಿ ಮನೆಗೆ ಬರುವಾಗ ಮಾರ್ಗತಪ್ಪಿ, ಕೆಸರಾಗಿರುವ ಒಂದು ಸಣ್ಣ ಕಾಲುವೆಯು ಅಡ್ಡವಾಗಿದ್ದುದರಿಂದ ದಾಟಲು ಸಾಧ್ಯವಿಲ್ಲದೆ ಕಷ್ಟಪಡುತ್ತಿದ್ದುದನ್ನು ದೂರದಿಂದಲೇ ಮಣಕ್ಕಾಲುನಂಬಿಯುವರು ಕಂಡು, ಬೇಗನೆ ಅಲ್ಲಿಗೆ ಹೋಗಿ ಅವರನ್ನೆತ್ತಿ ಆಕಡೆ ಬಿಡುವದು ಸರಿಯಾದುದಲ್ಲವೆಂದು ಭಾವಿಸಿ, ಆ ಕಾಲುವೆಯ ಕೆಸರಿನಲ್ಲಿಳಿದು ಬಗ್ಗಿನಿಂತು, ಆ ಹೆಣ್ಣುಮಕ್ಕಳು ತಮ್ಮ ಬೆನ್ನಿನಮೇಲೆ ನಡದುಹೋಗುವಹಾಗೆ ಮಾಡಿದರು. ಇವರಿಗಿದ್ದ ಮಹತ್ತಾದ ಗುರುಭಕ್ತಿಗಾಗಿ ಇವರು ಹೀಗೆ ಪ್ರವರ್ತಿಸಿದುದನ್ನು ನಂಬಿಯುವರ ಗುರುಗಳಾದ ಉಯ್ಯಕೊಂಡಾರ್ರವರು ಕೇಳಿ ತುಂಬಾ ಹರ್ಷವನ್ನು ತಾಳಿ ನಂಬಿಯುವರಿಗೆ ತುಂಬಾ ಅನುಗ್ರಹವನ್ನು ಮಾಡಿದರು. ಇವರು ತಮ್ಮ ಗುರುಗಳ

ಆಜ್ಞೆಯಪ್ರಕಾರ ಶ್ರೀಮನ್ನಾಥಮುನಿಗಳ ಪೌತ್ರರಾದ ಯಮುನೈತ್ತುರುವರ್ೈ (ಆಳವಂದಾರ್) ಯವರಿಗೆ ರಹಸ್ಯಾರ್ಥ ಮೊದಲಾದ ಶಾಸ್ತ್ರೋಪದೇಶಗಳನ್ನು ಗೈದರು.

**ಆಳವಂದಾರ್** (ಯಾಮುನಾಚಾರ್ಯರು, ಯಮುನೈತ್ತುರುವರ್ೈ ಯಾಮುನೇಯರು)—ಇವರು ಕಲಿ ೪೦೧೮ನೇ ಧಾತುವರ್ಷ, ಆಡಿಮಾಸ, ಪೌರ್ಣಮಿ ಬುಧವಾರ, ಉತ್ತರಾಷಾಢ ನಕ್ಷತ್ರದಲ್ಲಿ ಶ್ರೀಮನ್ನಾಥಮುನಿಗಳು ಅವತಾರಮಾಡಿದ ಶ್ರೀವೀರನಾರಾಯಣಪುರದಲ್ಲಿ ಜನಿಸಿದರು. ಶ್ರೀಮನ್ನಾಥಮುನಿಗಳು ತಾವು ಮೊದಲು ವಾಸವಾಗಿದ್ದ ಗೋವರ್ಧನಪುರಿಯ ಯಮುನೈತ್ತುರವರ್ೈಯ ಅನುಗ್ರಹದಿಂದ ತಮಗೆ ಪೌತ್ರನು ಉಂಟಾದನೆಂದು ಭಾವಿಸಿ, ತಮ್ಮ ಮಕ್ಕಳಾದ ಈಶ್ವರಮುನಿಗಳನ್ನು ಕರೆದು ಶಿಶುವಿಗೆ ಯಮುನೈತ್ತುರುವರ್ೈ ಎಂಬ ನಾಮಕರಣವನ್ನು ಮಾಡಬೇಕೆಂದು ಹೇಳಿ, ತಮ್ಮ ಶಿಷ್ಯರಾದ ಉಯ್ಯಕೊಂಡಾರವರಿಗೆ ಆ ಶಿಶುವು ಬೆಳೆದು ಪ್ರವರ್ಧಮಾನನಾದ ಬಳಿಕ ಮೂಲಮಂತ್ರಾದಿ ಸಕಲ ರಹಸ್ಯಾರ್ಥಗಳನ್ನು ಉಪದೇಶಿಸತಕ್ಕದ್ದೆಂದೂ, ತಮ್ಮ ಇನ್ನೊಬ್ಬ ಶಿಷ್ಯರಾದ ಕುರುಹೈಕಾವಲಪ್ಪನಿಗೆ ಯೋಗರಹಸ್ಯವನ್ನು ಉಪದೇಶಿಸತಕ್ಕದ್ದೆಂದೂ ನೇಮಿಸಿದರು.

ಈಶ್ವರಮುನಿಗಳು ಪಿತೃವಾಕ್ಯಪ್ರಕಾರ ಜಾತಕರ್ಮನಾಮಕರಣಾದಿಗಳನ್ನೂ ಹಾಗೆಯೇ ಚೌಲೋಪನಯನಾದಿಗಳನ್ನೂ ನಡಿಸಿದರು. ಆ ಕಾಲದಲ್ಲಿ ಉಯ್ಯಕೊಂಡಾರ್ರವರಿಗೆ ತುಂಬಾ ಅಶಕ್ತಿಯಾದುದರಿಂದ, ಗುರುವಿನ ಆಜ್ಞೆಯನ್ನು ನಡಿಸಲು ಮಾರ್ಗವಿಲ್ಲದೆ, ತುಂಬಾ ಖೇದಗೊಂಡು, ತಮ್ಮ ಶಿಷ್ಯರಾದ ಮಣಕ್ಕಾಲ್‌ನಂಬಿಯವರನ್ನು ಕರೆದು, ತನಗಂತೂ ಗುರು ಆಜ್ಞೆಯನ್ನು ನಡಿಸುವ ಪುಣ್ಯವಿಲ್ಲದಿದುದರಿಂದ, ನೀವಾದರೂ ಯಮುನೈತ್ತುರವರಿಗೆ ಮಂತ್ರೋಪದೇಶಮುಂತಾದವುಗಳನ್ನು ನಡಿಸುವದಲ್ಲದೆ, ಪ್ರಾಪ್ತವಯಸ್ಕರಾದಾಗ ರಹಸ್ಯಗಳ ಅಮೋಘಾರ್ಥಗಳನ್ನುಪದೇಶಮಾಡಬೇಕೆಂಬದಾಗಿ ವಿಧಿಸಿದ್ದರಿಂದ ಉಪನಯನವಾದನಂತರ ಚಕ್ರಾಂಕಿತಪುರಸ್ಸರವಾಗಿ ಮೂಲಮಂತ್ರೋಪದೇಶವನ್ನು ಮಾಡಿದರು.

ಇವರಿಗೆ ವೇದಾಧ್ಯಯನವು ನಡೆಯುವ ಕಾಲದಲ್ಲಿ ಒಂದೇ ಸಲ ವೇದೋಚ್ಚಾರಣೆಯಿಂದಲೇ ಸರ್ವವೇದೋಪನಿಷತ್ತುಗಳನ್ನೆಲ್ಲಾ ಸಂಗ್ರಹಿಸಿದುದಂ ನೋಡಿ ಇವರ ಜ್ಞಾನವಿಕಾಸಕ್ಕೆ ಎಲ್ಲರೂ ಆಶ್ಚರ್ಯ ಪಡುತ್ತಿದ್ದರು.

ಅನಂತರ ಈಶ್ವರಮುನಿಗಳು ಇವರಿಗೆ ವಿವಾಹವನ್ನು ನಡಿಸಿದವರಾಗಿ ಸ್ವಲ್ಪ ದಿನಗಳಲ್ಲೇ ಸ್ವಾಮಿಪಾದವನ್ನು ಸೇರಿದರು. ಯಮುನೈತ್ತುರವರು ತಂದೆಗೆ ಸಕಲ ಚರಮಕೈಂಕರ್ಯಗಳನ್ನೆಲ್ಲಾ ನಡಿಸಿದವರಾಗಿ ಮಹಾಭಾಷ್ಯಭಟ್ಟರ ಸನ್ನಿಧಿಯಲ್ಲಿ ಕಾಲಕ್ಷೇಪವನ್ನು ಮಾಡುತ್ತಿರುವಾಗ, ಆ ದೇಶವೆಂದರೆ ಚೋಳದೇಶರಾಜನ ಆಸ್ಥಾನಪಂಡಿತನಾದ ಅಕ್ಕಿಯಾಳ್ವಾನ್ ಎಂಬ ಶೈವನು ತಾನು ಮಹಾಪಂಡಿತನೆಂದೂ, ತನ್ನನ್ನು ಯಾರುಬೇಕಾದರೂ ಬಂದು ವಾದದಲ್ಲಿ ಜಯಿಸಬಹುದೆಂದೂ, ಹಾಗೆ ಜಯಿಸದೇ ಇರುವ ಪಂಡಿತರೆಲ್ಲಾ ತನಗೆ ಕಪ್ಪವನ್ನು ಕೊಡತಕ್ಕದ್ದೆಂಬದಾಗಿ ರಾಜನಬಲವಿರುವದರಿಂದ ಏರ್ಪಾಡುಮಾಡಿಕೊಂಡು ಈ ಮಹಾಭಾಷ್ಯಭಟ್ಟರಿಗೆ ಲಿಖಿತಮೂಲಕವಾಗಿ ಕಪ್ಪವನ್ನು ಕಳುಹಿಸೆಂದು ದೂತರಮೂಲಕ ಪತ್ರವನ್ನು ಬರೆದು ಈ ಅಕ್ಕಿಯಾಳ್ವಾನನು ಕಳುಹಿಸಲು, ಅದರಿಂದ ತಮ್ಮ ಗುರುಗಳು ಸ್ವಲ್ಪ ಖಿನ್ನರಾಗಿರುವವನ್ನು ಕಂಡು, ಪತ್ರದ ವಿಷಯವೇನೆಂಬದಾಗಿ ಕೇಳಲು, ಆಗ ಅವರು ಪತ್ರವನ್ನು ತನ್ನ ಶಿಷ್ಯನ ಕೈಯಲ್ಲಿ ಕೊಡಲಾಗಿ ಅದನ್ನು ಚೂರುಚೂರಾಗಿ ಹರಿದುಹಾಕಿ, ದೂತರನ್ನು ಕರೆದು ಅವರ ಶಿಷ್ಯರಾದ ಯಮುನೈತ್ತುರುವರ್ಯ ಹರಿದುಹಾಕಿದರೆಂದು ಅಕ್ಕಿಯಾಳ್ವಾನನಿಗೆ ಹೋಗಿ ಹೇಳು ಎಂದು ಕಳುಹಿಸಿದರು. ಅದಕ್ಕಾ ಅಕ್ಕಿಯಾಳ್ವಾನನು ಆ ಶಿಷ್ಯರೇನು ಕವಿಯೋ ವೇದಾಂತಿಯೋ ತಿಳಿದು ಬಾ ಎಂದು ದೂತನನ್ನು ಪತ್ರಕೊಟ್ಟು ಪುನಃ ಕಳುಹಲು, ಆ ಪತ್ರವನ್ನೂ ಹರಿದುಹಾಕಿ

ನವಯಂಕವಯಸ್ತು ಕೇವಲಂ ನವಯಂ ಕೇವಲ ತಂತ್ರಪಾರಗಾಃ ।
**ಅಪಿತುಪ್ರತಿವಾದಿವಾರಣಪ್ರಕಟಾಟೋಪ** ವಿಪಾಟನಕ್ಷಮಾಃ ॥

"ನಾವು ಬರೀ ಕವಿಗಳೂ ಅಲ್ಲ, ನಾವು ಬರೀ ಶಾಸ್ತ್ರಗಳಲ್ಲಿ ಪ್ರವೀಣತೆಯನ್ನು ಹೊಂದಿದವರೂ ಅಲ್ಲ. ಮತ್ತೇನೆಂದರೆ, ಪ್ರತಿವಾದಿಗಳೆಂಬ ಆನೆಗಳ ಗರ್ವವನ್ನು ಮೂಲೋತ್ಪಾಟನಮಾಡುವ ಶಕ್ತಿಯುಳ್ಳವರು" ಎಂಬ ಶ್ಲೋಕವನ್ನು ಬರೆದು ಕಳುಹಿಸಿದರು. ಇದನ್ನು ಆ ಆಸ್ಥಾನ ಪಂಡಿತನು ರಾಜನಿಗೆ ತೋರಲು, ಆ ರಾಜನು ಕುಪಿತನಾಗಿ ಈ ಯಾಮುನೈತ್ತುರುವರೆಯನ್ನು ಕರದುಕೊಂಡು ಬರಹೇಳಿ ಶಾಸನವನ್ನು ಬರೆದು ಕಳುಹಲು, ಈ ಶಾಸನವನ್ನೂ ಆ ಮೊದಲಿನ ಪತ್ರಗಳ ಹಾಗೆಯೇ ದೂತರ ಎದುರಿಗೇ ಹರಿದು ಬಿಸಾಡಿ ಬರುವದಿಲ್ಲವೆಂದು ಹೇಳಿಕಳುಹಿಸಲು, ಈ ವರ್ತಮಾನವನ್ನು ರಾಜನಪತ್ನಿಯಾದ ತಿರುವರಂಗತ್ತಮ್ಮೆಯು ತಿಳಿದವಳಾಗಿ, ತನ್ನ ಪತಿಯನ್ನು ಕುರಿತು, ಪಂಡಿತರನ್ನು ಧಿಕ್ಕರಿಸುವದು ಸರಿಯಲ್ಲವು, ಅವರನ್ನು ಸನ್ಮಾನಿಸಿ ಕರಿಸಿಕೊಂಡರಲ್ಲವೆ ಅವರು ನಮ್ಮಲ್ಲಿ ಬರುವರು ಎಂದು ಹೇಳಿದುದನ್ನು ರಾಜನು ವಿವೇಕವೆಂದು ಗ್ರಹಿಸಿ, ಪಲ್ಲಕ್ಕಿ ಮೊದಲಾದ ಮರ್ಯಾದೆಗಳಿಂದ ರಾಜಸಭೆಗೆ ಯಾಮುನೈತ್ತುರವರ್ರೆಯನ್ನು ಬರಮಾಡಿಕೊಳ್ಳಲು, ರಾಜಸಭೆಗೆ ಬಂದು,

ಆಶೈಲಾದದ್ರಿ ಕನ್ಯಾಚರಣಕಿಸಲಯನ್ಯಾಸ ಧನ್ಯೋಪಕಂಠಾ ।
ದಾರಕ್ಷೋನೀತ ಸೀತಾಮುಖಕಮಲಸಮುಲ್ಲಾಸಹೇತೋಶ್ಚ ಸೇತೋಃ
ಆಚಪ್ರಾಚ್ಯ ಪ್ರತೀಚ್ಯ ಕ್ಷಿತಿಧರಯುಗಳಾ ದರ್ಕಚಂದ್ರಾವತಂಸಾತ್ ।
ಮೀಮಾಂಸಾಶಾಸ್ತ್ರಯುಗ್ಮ ಶ್ರಮವಿಮಲಮನಾಮೃಗ್ಯತಾಂಮಾದೃಶೋನ್ಯಃ ॥

ಎಂಬ ಶ್ಲೋಕದಿಂದ ತಮ್ಮ ಬಿರುದನ್ನು ಕೂಗಿ ಹೊಗಳುವ ಹಾಗೆ ಮಾಡಿದರು. ಇದರಭಿಪ್ರಾಯವೇನೆಂದರೆ, ಪರ್ವತಕನ್ಯೆಯಾದ ಪಾರ್ವತಿಯಪಾದಕಮಲವನ್ನಿಡುವದರಿಂದ ಧನ್ಯತೆಯನ್ನು ಹೊಂದಿದ ಹಿಮವತ್ಪರ್ವತದಿಂದ, ರಾಕ್ಷಸನಾದ ರಾವಣನಿಂದ ಒಯ್ಯಲ್ಪಟ್ಟ ಸೀತಾಮುಖೋಲ್ಲಾಸಕ್ಕೆ ಕಾರಣಭೂತವಾದ ಸೇತುವಿನ ವರೆವಿಗೂ ಮತ್ತು ಪೂರ್ವಪಶ್ಚಿಮಾದ್ರಿಗಳ ಮಧ್ಯದಲ್ಲೂ ಇರುವ ಪೃಥ್ವಿಯಲ್ಲಿ ಎಲ್ಲಾದರೂ ನಮ್ಮಹಾಗೆ ಎರಡುಮೀಮಾಂಸೆಗಳಾದ ಪೂರ್ವೋತ್ತರಮೀಮಾ

ಸೆಗಳಲ್ಲಿ ಪ್ರವೀಣತೆಯನ್ನು ಹೊಂದಿದ ನಮ್ಮಂಥಾ ಇನ್ನೊಬ್ಬರನ್ನು ಹುಡುಕಿತರಕ್ಕದ್ದೆಂಬುದು ಈ ಶ್ಲೋಕಾರ್ಥವು. ಇದಕ್ಕೆ ಆಸ್ಥಾನ ಪಂಡಿತನು ಬಹುಕುಪಿತನಾಗಿ ವಾದಕ್ಕಿವರನ್ನು ಕರೆದಾಗ ಸಭೆಯಲ್ಲಿ ಪಂಡಿತರ ಮಧ್ಯಸ್ಥಕ್ಕೆ ಒಳಪಟ್ಟು ವಾದಮಾಡಲಿವರು ಒಪ್ಪಿಕೊಂಡರು. ರಾಜಪತ್ನಿಯು ವೈಷ್ಣವಳಾದುದರಿಂದ ಶೈವನಾದ ತನ್ನ ಗಂಡನನ್ನು ವೈಷ್ಣವನನ್ನಾಗಿ ಮಾಡಲು ಸುಸಮಯವೆಂದು ಭಾವಿಸಿ, ಈ ಯಮುನೈತ್ತುರುವರ್ರೈ ವಾದದಲ್ಲಿ ಗೆದ್ದರೆ ಏನು ಹೇಳುತ್ತೀಯೆ ಎನ್ನಲು, ಅದಕ್ಕಾರಾಜನು ತನ್ನ ಅರ್ಧರಾಜ್ಯವನ್ನು ಅವರಿಗೆ ಕೊಡುವದಲ್ಲದೆ, ಆಸ್ಥಾನಪಂಡಿತನು ಅವರಿಗೆ ದಾಸ್ಯವನ್ನು ಮಾಡುವನೆಂದು ಶಪಥವನ್ನು ಮಾಡಲು, ಒಡನೆ ಅಕ್ಕಿಯಾಳ್ವಾನನು ತನಗೆ ಅವರು ಉಂಟು ಎಂದು ಹೇಳಿದುದನ್ನು ಇಲ್ಲವೆಂದೂ, ಇಲ್ಲವೆಂದು ಹೇಳಿದುದನ್ನು ಉಂಟೆಂದೂ, ಸಾಧಿಸಲು ತನಗೆ ಸಾಮರ್ಥ್ಯ ಉಂಟೆಂದೂ ಅದಕ್ಕಾಗಿ ಬೇಕಾದರೆ ಪ್ರತಿಕಕ್ಷಿಯಾದ ಯಾಮುನೇಯರು ಮೂರು ವಾಕ್ಯವನ್ನು ಹೇಳಬಹುದೆನ್ನಲು; ಅದಕ್ಕಿವರು ಸಮ್ಮತಿಸಿ ಮೂರು ವಾಕ್ಯಗಳಾದ 1. "ರಾಜಾಯಂ ಸಾರ್ವಭೌಮಃ, 2. ರಾಜಪತ್ನೀಯಂ ಪತಿವ್ರತಾ, 3. ತ್ವನ್ಮಾತಾನವಂಧ್ಯಾ" ಎಂಬುವದನ್ನು ಹೇಳಿರಾಜನು ಸಾರ್ವಭೌಮನು, ರಾಜಪತ್ನಿಯು ಪತಿವ್ರತಳು, ನಿನ್ನ ತಾಯಿಯು ಬಂಜೆಯಲ್ಲವು ಎಂಬ ವಾಕ್ಯಗಳಲ್ಲಿ ಮೊದಲೆರಡರಲ್ಲಿ ಉಂಟೆಂಬುದನ್ನು ಇಲ್ಲವೆಂದೂ, ಮೂರನೇ ವಾಕ್ಯದಲ್ಲಿ ಅಲ್ಲವೆಂಬುವದನ್ನು ಉಂಟೆಂದೂ, ಸ್ಥಾಪಿಸು ಎನ್ನಲು, ಆಸ್ಥಾನ ಪಂಡಿತನು ಈ ಯುಕ್ತಿಗೆ ವಿರೋಧವಾಗಿ ಹೇಳಲು ಏನೂ ತೋಚದೆ ಸುಮ್ಮನಿರಲು.ಹೀಗೆ ಯುಕ್ತಿಯಲ್ಲೂ ವೇದಾಂತಶಾಸ್ತ್ರವಾದದಲ್ಲೂ ಸಹ ಆಸ್ಥಾನಪಂಡಿತನನ್ನು ಗೆದ್ದು, ರಾಜನನ್ನೂ ರಾಜಪತ್ನಿಯನ್ನೂ ಶಿಷ್ಯರನ್ನಾಗಿ ಮಾಡಿಕೊಂಡು, ಅರ್ಧರಾಜ್ಯವನ್ನು ಪಡೆದು ರಾಜ್ಯಾಡಳಿತವನ್ನು ಮಾಡುತ್ತಾ ಸುಖದಿಂದಿದ್ದರು. ಸಚ್ಛಾಸ್ತ್ರೋಪದೇಶಮೂಲಕ ಇವರುಗಳನ್ನು ಉಜ್ಜೀವಿಸುವಹಾಗೆ ರಕ್ಷಿಸಿದುದರಿಂದ, "ನಮ್ಮನ್ನು ಆಳವಂದೀರೋ ಅಂದರೆ ರಕ್ಷಿಸಲು ಬಂದಿರೋ" ಎಂದು ಇವರಿಗೆ ಆ ರಾಜದಂಪತಿಗಳು ಆಳವಂದಾರ್" ಎಂಬ ಹೆಸರು ಬರುವ

ಹಾಗೆ ಮಾಡಿದರು. ಆಸ್ಥಾನಪಂಡಿತನು ಇವರಿಗೆ ದಾಸ್ಯಮಾಡಬೇಕೆಂದು ರಾಜನು ವಿಧಿಸಲು, ಅದಕ್ಕೆ ಆಳವಾಂದಾರರು ಆತನೂ ಘನಪಂಡಿತನಾದುದರಿಂದ, ಕೊಡದೆಂಬದಾಗಿ ನಿರಾಕರಿಸಿದರು.

ಇವರು ಅನಂತರ ಸತ್ಕುಲಪ್ರಸೂತೆಯಾದ ಕನ್ಯೆಯನ್ನು ವಿವಾಹಮಾಡಿಕೊಂಡವರಾಗಿ ರಾಜಭೋಗದಲ್ಲಿ ಮಗ್ನರಾಗಿದ್ದುದರಿಂದ ಮಣಕ್ಕಾಲ್‌ನಂಬಿಯು ತಮ್ಮ ಗುರುವಿನ ಆಜ್ಞೆಯನ್ನು ನೆರವೇರಿಸಲು ಮಾರ್ಗವಿಲ್ಲದಿರಲು, ನಂಬಿಯುವರು ಈ ಆಳವಂದಾರರ ಅಡಿಗೇ ಮಾಡುವವನೊಂದಿಗೆ ಸ್ನೇಹವನ್ನು ಬೆಳಸಿ, ರಾಜರಿಗೆ ಇಷ್ಟವಾದ ಕಾಯಿಪಲ್ಯವಾವುದೆಂದು ಕೇಳಲು, ಆತನು ರಾಜರಿಗೆ ಹೊನಗೊನ್ನೇ ಸೊಪ್ಪಿನಲ್ಲಿ ತುಂಬಾ ಪ್ರೇಮವೆಂದರಿಕೇ ಮಾತಲು, ಆ ಸೊಪ್ಪನ್ನು ನಿತ್ಯವೂ ತಂದುಕೊಟ್ಟು ಪಲ್ಯಮಾಡಿ ಬಡಿಸುವ ಹಾಗೆ ಹೇಳಿದರು. ಹೀಗೆ ಕೆಲವು ಕಾಲ ಕಳೆದನಂತರ ಒಂದು ದಿನ ಸೊಪ್ಪನ್ನು ತರದಿರಲು ರಾಜನು ಅಡಿಗೆಯುವನನ್ನು ಕುರಿತು ಏಕೆ ಈವತ್ತು ಆ ಸೊಪ್ಪಿನಪಲ್ಯವನ್ನು ಮಾಡಲಿಲ್ಲವೆಂದು ಕೇಳಲು, ಅದಕ್ಕಾತನು ನಡೆದ ವೃತ್ತಾಂತವನ್ನು ತಿಳಿಸಲು ; ರಾಜನು ಆ ನಂಬಿಯುವರನ್ನು ಕರೆದುಕೊಂಡುಬಾ ಎಂದು ಹೇಳಿದುದಕ್ಕೆ, ರಾಜನ ಸಂದರ್ಶನವು ಕಡೆಗೆ ದೊರೆಯಿತಲ್ಲಾ ಎಂದು ಸಂತುಷ್ಟರಾಗಿ, ರಾಜನಂ ಕುರಿತು ನಿಮ್ಮ ಪಿತಾಮಹರಾದ ನಾಥಮುನಿಗಳಿಂದ ಬಂದ ದ್ರವ್ಯವನ್ನು ನಿಮಗೆ ಒಪ್ಪಿಸುವ ಹಾಗೆ ಹೇಳಿದ್ದಾರೆ, ಅದಕ್ಕಾಗಿ ತಾವು ದಯವಿಟ್ಟು ನನ್ನೊಂದಿಗೆ ಸ್ವಲ್ಪದೂರ ಬರಬೇಕೆಂಬದಾಗಿ ಕೇಳಿಕೊಂಡು, ಅದಕ್ಕೆ ಮುಂಚಿತವಾಗಿ ತಮ್ಮಲ್ಲಿಗೆ ನಾನು ಪದೇಪದೇ ಬಂದುಹೋಗುವಹಾಗೆ ಅಪ್ಪಣೆಯಾಗಬೇಕೆಂದು ಪ್ರಾರ್ಥಿಸಿ, ೧೮ ದಿನಗಳಲ್ಲಿ ಶ್ರೀಮದ್ಭಗವದ್ಗೀತೆಯ ಅರ್ಥಸ್ವಾರಸ್ಯಗಳನ್ನೆಲ್ಲಾ ಬೋಧಿಸಿ, ಸ್ವಾಮಿಯಲ್ಲಿ ನಿರತಿಶಯಭಕ್ತಿಯುಂಟಾಗುವಹಾಗೆಮಾಡಿ, ಆ ಮಹಾನುಭಾವನನ್ನು ಹೊಂದಲು ಉಪಾಯವನ್ನು ಹೇಳಬೇಕೆಂದು ಆಳವಂದಾರರು ಪ್ರಾರ್ಥಿಸಲು; ಆಗ ನಂಬಿಯುವರು ಚರಮಶ್ಲೋಕ ಮುಂತಾದ ಮೂರು ರಹಸ್ಯಗಳ ಅರ್ಥವನ್ನೆಲ್ಲಾ ಉಪದೇಶಿಸಿ, ಐಹಿಕದಲ್ಲಿ ಜಿಹಾಸೆಯುಂಟಾಗುವ ಹಾಗೆ ಮಾಡಿ, ಶರಣಾಗತಿಯುಮಾ

ಹಾತ್ಮ್ಯೆಯನ್ನು ಅದರ ಅಂಗಾಂಗಿಭಾವಗಳನ್ನೆಲ್ಲಾ ಸಮಗ್ರವಾಗಿ ತಿಳಿಸಿ ಅವರನ್ನು ಶ್ರೀರಂಗನಾಥನಮುಂದೆ ಕರದುಕೊಂಡು ಹೋಗಿ ಸಿಲ್ಲಿಸಿ, ಇದೀಗ ತಮ್ಮ ಪಿತಾಮಹಧನವೆಂಬದಾಗಿ ಹೇಳಿ, ತಮ್ಮ ಮಕ್ಕಳೊಂದಿಗೆ ಆಳವಂದಾರು ಶ್ರೀರಂಗನಾಥ ಸನ್ನಿಧಿಯಲ್ಲಿ, ಶ್ರೀವಿಭೀಷಣನು ತನ್ನ ನಾಲ್ಕು ಮಂದಿ ಮಂತ್ರಿಗಳೊಂದಿಗೆ ಶ್ರೀರಾಮನಲ್ಲಿ ಶರಣಾಗತಿ ಮಾಡಿದಹಾಗೆ ಪ್ರಪತ್ತಿ ಧರ್ಮವನ್ನವಲಂಬಿಸಿದರು.

ಅನಂತರ ಸನ್ಯಾಸವೃತ್ತಿಯನ್ನವಲಂಬಿಸಿದವರಾಗಿ, ಈ ಶರಣಾಗತಿಧರ್ಮಮಾಹಾತ್ಮ್ಯೆಯನ್ನು ಎಲ್ಲರೂ ಅರಿತು ಅವಲಂಬಿಸಲಿ ಎಂಬ ಔದಾರ್ಯಾತಿಶಯದಿಂದ ಶ್ರೀಮಹಾಲಕ್ಷ್ಮೀಪ್ರಪದನರೂಪವಾದ ಚತುಶ್ಲೋಕಿಯನ್ನೂ, ಶ್ರೀಮನ್ನಾರಾಯಣನಲ್ಲಿ ಮಾಡಿದ ಪ್ರಪತ್ತಿರೂಪವಾದ ಸ್ತೋತ್ರರತ್ನವನ್ನೂ (ಶ್ರೀಆಳವಂದಾರ್‌ಸ್ತೋತ್ರ), ಆಗಮಪ್ರಾಮಾಣ್ಯ, ಆತ್ಮಸಿದ್ಧಿ, ಸಂವಿತ್ಸಿದ್ಧಿ, ಈಶ್ವರಸಿದ್ಧಿ ಎಂಬ ಸಿದ್ಧಿತ್ರಯ ಗೀತಾರ್ಥಸಂಗ್ರಹವೆಂಬುವುಗಳನ್ನೂ ರಚಿಸಿದರು.

ಅನಂತರ ಮಣಕ್ಕಾಲ್‌ನಂಬಿಯು ಆಳವಂದಾರನ್ನು ಕುರಿತು ಯೋಗರಹಸ್ಯವನ್ನೆಲ್ಲಾ ನಿಮಗೆ ತಿಳಿಸುವಹಾಗೆ ಕುರುಹೈಕಾವಲಪ್ಪನ್ ಎಂಬುವರಿಗೆ ನಿಮ್ಮ ಪಿತಾಮಹರು ನಿಯಮಿಸಿದ್ದಾರಾದುದರಿಂದ ನೀವು ಅವರನ್ನು ಆಶ್ರಯಿಸಿ, ಯೋಗಮಾಹಾತ್ಮ್ಯೆಯನ್ನು ತಿಳಿದು ಅನುಷ್ಠಿಸತಕ್ಕದ್ದೆಂದು ಹೇಳಲು, ಆ ಗುರು ಆಜ್ಞೆಯನ್ನು ಆಳವಂದಾರವರು ಶಿರಸಾವಹಿಸಿ, ಅಲ್ಲಿಂದ ಹೊರಟು ಕುರುಹೈಕಾವಲಪ್ಪನ್ ರವರು ಯೋಗಾಭ್ಯಾಸದಲ್ಲಿ ಮಗ್ನರಾಗಿದ್ದ ವೀರನಾರಾಯಣಪುರಿಯನ್ನು ಸೇರಿ, ಅವರನ್ನು ಸೇವಿಸಿದವರಾಗಿ ಯೋಗರಹಸ್ಯೋಪದೇಶವನ್ನು ಪ್ರಾರ್ಥಿಸಲಾಗಿ, ಅದಕ್ಕೆ ಕಾವಲಪ್ಪನವರು, ಆಳವಂದಾರನ್ನು ಕುರಿತು, ತಮಗೆ ದೇಹಾವಸಾನಕಾಲವು ಬರುವ ಪುಷ್ಯಮಾಸ, ಪುಷ್ಯನಕ್ಷತ್ರದಲ್ಲಿ ಉಂಟಾಗುತ್ತದೆ, ಆವೇಳೆಗೆ ಬಂದರೆ ಉಪದೇಶ ದೊರೆಯುತ್ತದೆಂದು ಹೇಳಲು ಆದಿನವನ್ನು ಜ್ಞಾಪಕದಲ್ಲಿಟ್ಟವರಾಗಿ ಪುನಃ ಹಿಂತಿರುಗಿ ಶ್ರೀರಂಗಾದಿ ದಿವ್ಯದೇಶಗಳಲ್ಲಿ ಅಧ್ಯಯನೋತ್ಸವದ ತಿರುವಾಯ್‌ಮೊಳಿ ಸೇವೆ ಮೊದಲಾದವುಗಳಲ್ಲಿ ಮಗ್ನರಾಗಿ

ದೇಹಪರವಶರಾಗಿ, ಕುರುಹೈಕಾವಲಪ್ಪೆರಪರು ಹೇಳಿದ್ದ ಕಾಲವು ಅತಿಕ್ರಾಂತವಾಗದ್ದುದರಿಂದ ತುಂಬಾ ವ್ಯಸನಪಟ್ಟವರಾಗಿರುವಾಗ ಪ್ರಪನ್ನನಿಗೆ ಆಚಾರ್ಯಕೈಂಕರ್ಯವೇ ಮುಖ್ಯವು, ಯೋಗಾದಿಗಳ ಅವಶ್ಯಕತೆ ಏನೂ ಇಲ್ಲವೆಂದು ಕೇಳಿ ತಿಳಿದುದರಿಂದ ಶೋಕವನ್ನು ನೀಗಿ ವೇದಾಂತಪ್ರವಚನವನ್ನು ಮಾಡಿಕೊಂಡು ಸುಖದಿಂದಿದ್ದರು. ಪ್ರತಿದಿನದಲ್ಲೂ ಶ್ರೀರಂಗನಾಥನನ್ನು ಸೇವಿಸುವಾಗ, ವಿಶಿಷ್ಟಾದ್ವೈತದರ್ಶನಸ್ಥಾಪಕರಾಗಿ ಒಬ್ಬರು ಅವತರಿಸುವಹಾಗೆ ಮಾಡಕೂಡದೇ ಎಂಬದಾಗಿ ಪ್ರಾರ್ಥಿಸುತ್ತಿದ್ದರು.

ಹೀಗಿರುವಲ್ಲಿ, ಒಂದುದಿನ ಇವರ ಶಿಷ್ಯರಾದ ತಿರುಮಲೈ ನಂಬಿಯವರು "ಒಳವಿಲ್‌ಕಾಲಮೆಲ್ಲಾಂ" (ತಿರು. ೩, ೩, ೧) ಎಂಬ ತಿರುವಾಯ್‌ಮೊಳಿ ಪಾಶುರದ ಅರ್ಥಸ್ವಾರಸ್ಯವನ್ನು ಗ್ರಹಿಸಿದವರಾಗಿ ಅದರಲ್ಲಿ ಉಪಪಾದಿತವಾಗಿರುವ ಹಾಗೆ ತಿರುಮಲೈಯ ತಿರುವೇಂಗಡಮುಡೈಯಾನನಕೈಂಕರ್ಯವೇ ತಮಗೆ ಸ್ವರೂಪವೆಂದು ಭಾವಿಸಿದವರಾಗಿ ತಿರುಮಲೆಗೆ ಹೋಗಬೇಕೆಂಬ ತಮ್ಮ ಅಭಿಪ್ರಾಯವನ್ನು ತಮ್ಮ ಗುರುಗಳಿಗೆ ತಿಳಿಸಿದವರಾಗಿ ಅನುಜ್ಞೆಯನ್ನು ಪ್ರಾರ್ಥಿಸಲು, ಇವರಿಗೆ ಸ್ವಾಮಿಯಲ್ಲಿ ಇಂತಹ ನಿರತಿಶಯಭಕ್ತಿಯುಂಟಾದುದನ್ನು ಕಂಡು, ಇವರ ಮೂಲಕವಾಗಿಯೇ ತಮ್ಮ ದರ್ಶನಸ್ಥಾಪನವಾಗಬೇಕೆಂಬ ಕೋರಿಕೆಯ ಅಂಕುರವು ವೃದ್ಧಿಹೊಂದಿ ಫಲವತ್ತಾಗಬೇಕೆಂದು ಭಾವಿಸಿ ಅವರಿಗೆ ಶ್ರೀಪಾದತೀರ್ಥವನ್ನನುಗ್ರಹಿಸಿ ನೇಮನವನ್ನು ಕೊಡಲು; ಅವರು ತಿರುಮಲೆಯನ್ನು ಸೇರಿ, ತಿರುವೇಂಗಡಮುಡೈಯಾನನ ಸೇವೆಯಲ್ಲೇ ನಿರತರಾಗಿದ್ದುಕೊಂಡಿದ್ದರು. ಈ ತಿರುಮಲೈನಂಬಿಗೆ ಇಬ್ಬರು ಗಂಡುಮಕ್ಕಳು, ಇಬ್ಬರು ಹೆಣ್ಣುಮಕ್ಕಳು; ಅದೂ ಅಲ್ಲದೆ ಶ್ರೀಅಂಶಜೆಯಾದ ಕಾಂತಿಮತೀದೇವಿ, ಭೂಮ್ಯಂಶಜೆಯಾದ ದ್ಯುತಿಮತಿ ಎಂಬ ಇಬ್ಬರು ಸಹೋದರಿಯರಿದ್ದರು. ಹೀಗಿರುವಲ್ಲಿ ಅಲ್ಲಿಗೆ ಶ್ರೀಪೆರಂಬುದೂರಿನಿಂದ ನಾರಾಯಣಾಂಶಜರಾದ ಹಾರೀತಗೋತ್ರ ಶ್ರೀಕೇಶವಸೋಮಯಾಜಿಗಳೂ, ಮಧುರಮಂಗಲ

ದಿಂದ ಭಾರಧ್ವಾಜಗೋತ್ರೋದ್ಭವರಾದ ನಾರಾಯಣಾಂಶಜರಾದ ಕಮಲನಯನ ಭಟ್ಟರೂ ಬರಲು; ಇವರಿಬ್ಬರ ತೇಜಸ್ಸನ್ನು ಕಂಡು, ತುಂಬಾ ಸಂತೋಷದಿಂದ ಇವರಿಬ್ಬರಿಗೂ ಚಕ್ರಾಂಕಿತ ಮಂತ್ರೋಪದೇಶಗಳನ್ನೂ ಮಾಡಿ, ಕೇಶವಸೋಮಯಾಜಿಗೆ ಕಾಂತಿಮತೀ ದೇವಿಯನ್ನೂ ಕಮಲನಯನಭಟ್ಟರಿಗೆ ದ್ಯುತಿಮತಿಯನ್ನೂ ಕೊಟ್ಟು ವಿವಾಹ ಮಹೋತ್ಸವನ್ನು ಬೆಳೆಸಿ, ದರ್ಶನಸ್ಥಾಪಕರಾದ ಪುತ್ರರನ್ನು ಈ ದಂಪತಿಗಳಿಗೆ ಕೊಡುವಹಾಗೆ ತಿರುವೇಂಗಡಮುಡೈಯಾನನನ್ನು ಪ್ರಾರ್ಥಿಸುತ್ತಿರಲು; ಶ್ರೀನಿವಾಸಕೃಪೆಯಿಂದ ಕೇಶವಸೋಮಯಾಜಿ ಕಾಂತಿಮತೀದೇವಿಗಳಿಗೆ ಪುತ್ರರಾಗಿ ಶೇಷಾಂಶರಾದ ಶ್ರೀರಾಮಾನುಜಾಚಾರ್ಯರವರೂ ಕಮಲನಯನಭಟ್ಟರೂ ದ್ಯುತಿಮತಿಗಳಿಗೆ ಪುತ್ರರಾಗಿ ಗರುಡಾಂಶರಾದ ಗೋವಿಂದಭಟ್ಟರೂ (ಯಂಬಾರರು) ಅವತರಿಸಿದರು.

ಶ್ರೀ ಆಳವಂದಾರವರಿಗೆ ಮೂರು ವಿಷಯಗಳನ್ನು ನಡಿಸಬೇಕೆಂಬ ಕುತೂಹಲವು ತುಂಬಾ ಬಾಧಿಸುತ್ತಿತ್ತು. ಅವುಗಳು ಯಾವುವೆಂದರೆ :—

1. ವ್ಯಾಸಸೂತ್ರಗಳಿಗೆ ಪೂರ್ವಾಪರವಿರೋಧಗಳಿಲ್ಲದೆ, ಸಮಂಜಸವಾಗಿ ವೇದಾರ್ಥಗಳಿಗೇನೂ ಬಾಧೆಯಿಲ್ಲದಹಾಗೆ ವಿಶಿಷ್ಟಾದ್ವೈತ ಸಿದ್ಧಾಂತರೀತ್ಯಾ ಶ್ರೀಭಾಷ್ಯವನ್ನು ಯಾರಾದರೂ ತುಂಬಾ ಪಾಂಡಿತ್ಯವಿರುವವರು ರಚಿಸತಕ್ಕದ್ದು.

2. ಪುರಾಣರತ್ನವೆಂದೆನಿಸಿ ಶ್ರೀಮಹಾಲಕ್ಷ್ಮಿ ಮತ್ತು ವಿಷ್ಣುವೂ ಸಹ ಜಗತ್ಕಾರಣರಾಗಿ ಇವರುಗಳ ಪಾರಮ್ಯತೆಯನ್ನು ಬಹು ನಿಪುಣವಾಗಿ ಬೋಧಿಸುವ ಶ್ರೀವಿಷ್ಣುಪುರಾಣವನ್ನು ರಚಿಸಿದ ಮಹರ್ಷಿಯಾದ ಪರಾಶರರ ಹೆಸರನ್ನು ಒಬ್ಬ ಸರಿಯಾದ ಅರ್ಹರಾದವರಿಗೆ ಇಡುವದು ಮತ್ತು ಅವರಿಂದ ಸಹಸ್ರನಾಮಭಾಷ್ಯವು ರಚಿಸಲ್ಪಡತಕ್ಕದ್ದು.

3. ಈ ವೇದದ ಅರ್ಥಗಳನ್ನೆಲ್ಲಾ ಬಹು ಸ್ವಾರಸ್ಯವಾಗಿ ಭಕ್ತಿರಸ ತುಂಬಿತುಳುಕುವ ದ್ರಾವಿಡಪ್ರಬಂಧವಾದ ತಿರುವಾಯ್ಮೊಳಿಯನ್ನು ರಚಿಸಿ, ವಿಶಿಷ್ಟಾದ್ವೈತ ಸಿದ್ಧಾಂತವನ್ನೂ ಪ್ರಪದನ ಶಾಸ್ತ್ರವನ್ನೂ ಪ್ರಚುರಗೊಳಿಸಿದ ನಮ್ಮಾಳ್ವಾರವರ ಹೆಸರನ್ನು ಒಬ

ಯೋಗ್ಯರಿಗಿಡುವದು, ಅವರಿಂದ ಆ ತಿರುವಾಯ್‌ಮೊಳಿಗೆ ಭಾಷ್ಯವು ಬರಿಯಲ್ಪಡತಕ್ಕದ್ದು.

ಈ ತಮ್ಮ ಅಭಿಪ್ರಾಯಗಳು ನೆರವೇರುವ ಹಾಗೆ ಮಾಡೆಂಬದಾಗಿ ಅನವರತ ಶ್ರೀರಂಗನಾಥನನ್ನು ಪ್ರಾರ್ಥಿಸುತ್ತಿದ್ದರು. ಭಕ್ತಾಭೀಷ್ಟಗಳನ್ನು ನಡಿಸಿಕೊಡಲು ಕಂಕಣಬದ್ಧನಾದ ಶ್ರೀರಂಗನಾಥನು ತನಗೆ ನಿರಂತರ ಕೈಂಕರ್ಯದಲ್ಲೇ ಸಕ್ತನಾಗಿ ಶೇಷಶಬ್ದವನ್ನು ಸಾರ್ಥಕ್ಯ ಹೊಂದಿಸಿದ ಮಹಾಶೇಷನ ಅಂಶಾವತಾರವಾಗಿ ಸ್ವಾಮಿರಾಮಾನುಜಾಚಾರ್ಯರವರು ತುಂಬಾ ಜ್ಞಾನವಿಕಾಸದೊಡನೆ ಜನಿಸಿ ಅಭಿವೃದ್ಧಿಯನ್ನು ಹೊಂದಿರುತ್ತಾರೆಂದೂ, ಶ್ರೀತಿರುವೇಂಗಡಮೊಡೈಯಾನನೂ, ಶ್ರೀರಂಗನಾಥನೂ ಅವರಿಗೆ ತುಂಬಾ ಕೃಪೆಮಾಡಿರುತ್ತಾರೆಂದೂ ಕೇಳಿ ತುಂಬಾ ಹರ್ಷಯುಕ್ತರಾಗಿ ಅವರನ್ನು ನೋಡಬೇಕೆಂಬ ಕುತೂಹಲದಿಂದ ಕಾಂಚೀಪುರಕ್ಕೆ ಹೋಗಿ,

ಯಸ್ಯಪ್ರಸಾದಕಲಯಾ ಬಧಿರಶ್ಶೃಣೋತಿ ಪಂಗುಃ ಪ್ರಧಾವತಿ
ಜವೇನ ಚ ವಕ್ತಿಮೂಕಃ ।
ಅಂಧಃ ಪ್ರಪಶ್ಯತಿ ಸುತಂ ಲಭತೇಚ ವಂಧ್ಯಾ ತಂ ದೇವಮೇವ
ವರದಂ ಶರಣಾಗತೋಽಸ್ಮಿ ॥

"ಯಾವ ಮಹಾತ್ಮನ ಪ್ರಸಾದಲೇಶದಿಂದ ಕಿವುಡನಿಗೆ ಕಿವಿಕೇಳಿಸುತ್ತೆಯೋ, ಕುಂಟನು ಓಡುವನೋ, ಮೂಗನು ಮಾತಾಡುವನೋ, ಕುರುಡನಿಗೆ ಕಣ್ಣು ಕಾಣಿಸುತ್ತದೆಯೋ, ಬಂಜೆಯು ಪುತ್ರನನ್ನು ಪಡೆಯುವಳೋ, ಅಂತಹ ದೇವನಾದ ವರದರಾಜಸ್ವಾಮಿಯನ್ನು ಶರಣು ಹೊಂದುವನೆಂದು ಹೇಳಿ ಈ ರಾಮಾನುಜಾಚಾರ್ಯರಿಂದ ವಿಶಿಷ್ಟಾದ್ವೈತಸ್ಥಾಪನೆಯು ಆಗುವಹಾಗೆ ಕರುಣಿಸಬೇಕೆಂದು ಪ್ರಾರ್ಥಿಸಿದರು. ಆದರೆ ಭಗವಾನ್‌ರಾಮಾನುಜಾಚಾರ್ಯರು ಆಗ ಯಾದವ ಪ್ರಕಾಶನೆಂಬ ಅದ್ವೈತಿಯಿಂದ ಅವರು 'ಸತ್ಯಂ ಜ್ಞಾನಮನಂತಂಬ್ರಹ್ಮ' 'ಕಪ್ಯಾಸಂಪುಂಡರೀಕಂ' ಇತ್ಯಾದಿ ಶ್ರುತಿವಾಕ್ಯಗಳಿಗೆ ಅಪಾರ್ಥವನ್ನು ಹೇಳಿದರೂ ಶಾಂಕರಸಿದ್ಧಾಂತವು ತಮಗೆ ಪೂರ್ವಪಕ್ಷಕ್ಕೆ ಬೇಕಾದುದರಿಂದ ಅದನ್ನು ಅವರಿಂದ ಸಂಗ್ರಹಿಸುತ್ತಿದ್ದುದರಿಂದ ಯಾಮುನಾಚಾರ್ಯರು

ಶ್ರೀರಾಮಾನುಜರೊಂದಿಗೆ ಮಾತನಾಡದೇನೆ ತಮ್ಮ ಊರಾದ ವೀರ ನಾರಾಯಣಪುರಕ್ಕೆ ತೆರಳಿದರು.

ಇಷ್ಟರಲ್ಲೇ ಆಳವಂದಾರವರಿಗೆ ದೇಹದಲ್ಲಿ ಸ್ವಸ್ಥವಿಲ್ಲವೆಂಬ ವರ್ತಮಾನವನ್ನು ಕೇಳಿ ಅವರ ಶಿಷ್ಯರಾದ ಪೆರಿಯನಂಬಿ, ತಿರುಕ್ಕೋಟ್ಟಿಯೂರ್‌ನಂಬಿಗಳು, ಆಳವಂದಾರವರಿಗೆ ಪ್ರಣಾಮಮಾಡಿ ತಮಗೆ ತುಂಬಾ ಅಮೋಘವಾದ ಉಪದೇಶವನ್ನು ಹೇಳಬೇಕಾಗಿ ಪ್ರಾರ್ಥಿಸಲು, ಅದಕ್ಕೆ ಆಳವಂದಾರ್‌ವರು ಅವರನ್ನು ಕುರಿತು ಹೇಳಿದ್ದೇನೆಂದರೆ :—

1. ಸದಾಚಾರ್ಯಕಟಾಕ್ಷವನ್ನು ಹೊಂದಿದ ನೀವು ಮೊದಲು ಜ್ಞಾಪಕದಲ್ಲಿಡತಕ್ಕದ್ದು ಆಚಾರ್ಯಪರಂಪರೆಯಲ್ಲಿ ಕೃತಜ್ಞತಾಭಾವವು.

2. ನೀವು ಮುಖ್ಯವಾಗಿ ಮಾಡತಕ್ಕದ್ದು ಆಜ್ಞಾನುಜ್ಞಾ ರೂಪವಾದ ಭಗವತ್ಕೈಂಕರ್ಯವು.

3. ಈ ಭಗವತ್ಕೈಂಕರ್ಯಕ್ಕೆ ಭಾಗವತಕೈಂಕರ್ಯಪರ್ಯಂತವಾಗಿ ಅನ್ವಯ ಉಂಟೆಂದು ಭಾವಿಸತಕ್ಕದ್ದು.

4. ನೀವು ಸತ್ಪಾತ್ರರಾದ ಇತರರಿಗೆ ಉಪದೇಶಿಸತಕ್ಕದ್ದು ಮೋಕ್ಷೋಪಾಯವಾದ ಪ್ರಪತ್ತಿಧರ್ಮವು ಇದನ್ನು ಇತರರು ಅನುಷ್ಠಿಸುವಹಾಗೆ ಮಾಡತಕ್ಕದ್ದು.

5. ಹೀಗೆ ಮಾಡಿಸಿದ ಕೃತಕೃತ್ಯನಿಗೆ ಮೇಲೆಹೇಳಿದಹಾಗೆ ಆಚಾರ್ಯರಲ್ಲಿ ಕೃತಜ್ಞತೆಯು ಇರುವಹಾಗೂ ದೇಹಾವಸಾನದವರಿವಿಗೂ ಮೇಲೆ ಹೇಳಿದಹಾಗೆ ಭಗವದ್ಭಾಗವತಕೈಂಕರ್ಯನಿರತರಾಗಿ ಅವರಿರುವ ಹಾಗೂ ಮಾಡತಕ್ಕದ್ದು.

ಕೆಲವು ಕಾಲ ಕಳೆದ ನಂತರ ಕೆಲವು ಶ್ರೀವೈಷ್ಣವರು ಕಾಂಚೀಪುರದಿಂದ ಯಾತ್ರಾರ್ಥವಾಗಿ ಬಂದು ಶ್ರೀಆಳವಂದಾರರವರಿಗೆ ಪ್ರಣಾಮಮಾಡಿ ನಿಂತಿರಲು ಅವರನ್ನು ಶ್ರೀಆಳವಂದಾರರು ಕಂಡು ಶ್ರೀರಾಮಾನುಜಾಚಾರ್ಯರವರ ಯೋಗಕ್ಷೇಮವನ್ನು ವಿಚಾರಿಸಲು, ಆಗ ಆ ಶ್ರೀವೈಷ್ಣವರುಗಳು, ಯಾದವಪ್ರಕಾಶರು "ಸರ್ವಂ ಖಲ್ವಿದಂಬ್ರಹ್ಮ" ಮುಂತಾದ ಕೆಲವು ಶ್ರುತಿಗಳಿಗೆ ಅಪಾರ್ಥವನ್ನು

ಹೇಳಿದುವರಿಂದ ಅವರನ್ನು ತ್ಯಜಿಸಿದರೆಂದೂ, ಈಗ ಶ್ರೀವರದರಾಜರಿಗೆ ತಿರುಮುಂಜಿಸಕ್ಕೈಂಕರ್ಯಮಾಡಿಕೊಂಡಿದ್ದಾರೆಂದೂ ಹೇಳಿದರು. ಅದಕ್ಕೆ ತುಂಬಾ ಆನಂದಭರಿತರಾಗಿ ನಮ್ಮ ದರ್ಶನಸ್ಥಾಪಕರಾಗುವರೊಬ್ಬರು ಅವತರಿಸಬೇಕೆಂದು ತಾವು ಪ್ರಾರ್ಥಿಸಿ ಮಾಡಿದ ಶರಣಾಗತಿಯು ಫಲವೆಂದು ಭಾವಿಸಿ ಶ್ರೀರಾಮಾನುಜಾಚಾರ್ಯರವರನ್ನು ಕರೆದುಕೊಂಡು ಬರುವಹಾಗೆ ತಮ್ಮ ಶಿಷ್ಯರಾದ ಪೆರಿಯನಂಬಿಗೆ ಆಳವಂದಾರ್ರವರು ಆಜ್ಞಾಪಿಸಿದರು. ಪೆರಿಯನಂಬಿಗಳು ಕಾಂಚೀಪುರಕ್ಕೆ ಬಂದು ಆಳವಂದಾರ್‌ಸ್ತೋತ್ರದ ೧೩ನೇ ಶ್ಲೋಕವಾದ "ಸ್ವಾಭಾವಿಕಾನವಧಿಕಾ" ಎಂಬುವದನ್ನು ಯತಿರಾಜರು ಕೇಳುವಹಾಗೆ ಹೇಳಲು, ಅವರ ಸ್ವಾರಸ್ಯವನ್ನು ಗ್ರಹಿಸಿ ಯತಿವರ್ಯರು ಇದು ಯಾರು ಅನುಗ್ರಹಿಸಿದರೆಂದು ವಿಚಾರಮಾಡಲು, ಅದಕ್ಕೆ ಪೆರಿಯನಂಬಿಗಳು ಯಾಮುನೇಯರೆಂದು ಹೇಳಲು, ಅದಕ್ಕೆ ಯತಿಗಳು ಅವರನ್ನು ನೋಡಬೇಕೆಂಬ ತಮ್ಮ ಸಂಕಲ್ಪವನ್ನು ಅರಿಕೆಮಾಡಲು ಆಗ ಅವರೂ ಪೆರಿಯನಂಬಿಗಳೂ ಆಳವಂದಾರ್ರವರಲ್ಲಿಗೆ ಪ್ರಯಾಣಮಾಡಿದರು. ಇಷ್ಟರಲ್ಲೀ ಯಾಮುನಮುನಿಗಳಿಗೆ ದೇಹಾವಸಾನಕಾಲ ಬರಲು, ಶ್ರೀನಾಥಮುನಿಗಳ ತಿರುವಡಿಯನ್ನು ಶಿರಸ್ಸಿನಲ್ಲಿ ಧರಿಸಿ, ಅವರ ಶ್ರೀಪಾದತೀರ್ಥವನ್ನು ಸ್ವೀಕರಿಸಿದವರಾಗಿ ದ್ವಯಮಂತ್ರೋಚ್ಚಾರಣೆಯನ್ನು ಮಾಡುತ್ತಾ ೧೨೫ ಸಂವತ್ಸರಗಳ ಕಾಲ ಪೃಥ್ವಿಯನ್ನು ಅಲಂಕರಿಸಿ, ಸ್ವಾಮಿಪಾದವನ್ನು ಹೊಂದಿದರು. ಆ ಕಾಲದಲ್ಲಿ ಅವರ ಕಣ್ಣಿನಲ್ಲಿ ಅಶ್ರುವೂ, ಮೂರು ಬೆರಳುಗಳು ಮಡಿಸಿದವುಗಳಾಗಿಯೂ ಇದ್ದವು. ಪೆರಿಯನಂಬಿಗಳೂ ಶ್ರೀಭಾಷ್ಯಕಾರರೂ ಇಬ್ಬರೂ ತುಂಬಾ ತ್ವರೆಯಿಂದ ಬಂದರೂ ಯಾಮುನಮುನಿಗಳು ಗತಿಸಿದುದನ್ನು ಕೇಳಿ ತುಂಬಾ ಪರಿತಾಪಪಟ್ಟವರಾಗಿ, ಅವರ ದಿವ್ಯಶರೀರವನ್ನು ಯತಿವರ್ಯರು ಕಂಡು ಪ್ರಣಾಮಮಾಡಿ, ಕಣ್ಣಿನಲ್ಲಿ ನೀರೂ, ಮೂರು ಬೆರಳುಗಳು ಮಡಿಸಿರುವವಕ್ಕೆ ಕಾರಣವೇನೆಂದು ಪರಿಜನಂಗಳನ್ನು ಪ್ರಶ್ನಿಸಲು, ಅವಕ್ಕೆ ಸರಿಯಾದ ಕಾರಣವೇನೂ ತಮಗೂ ತಿಳಿಯದು, ಆದರೆ ಅವರಿಗೆ ವಿಶಿಷ್ಟಾದ್ವೈತಸಿದ್ಧಾಂತಸ್ಥಾಪನ ನಡಿಯಲಿಲ್ಲವೇ ಎಂಬ ಮನಸ್ಸಿನ ಕೊರತೆಯನ್ನೂ ಅವರಿಗೆ

**ಗುರುಂಪ್ರಕಾಶಯೇದ್ಧೀಮಾನ್ ಮಂತ್ರಂ ಯತ್ನೇನ ಗೋಪಯೇತ್ ।**
**ಅಪ್ರಕಾಶ ಪ್ರಕಾಶಾಭ್ಯಾಂ ಕ್ಷೀಯೇತೇಸಂಪದಾಯುಷೀ[1]॥ ಎನ್ನಾರ್ ಗಳ್.**

ಇದ್ದ ಮೇಲೆಹೇಳಿದ ಮೂರು ಅಭಿಪ್ರಾಯಗಳನ್ನೂ ತಿಳಿಸಲು, ಆಗ ಯತಿರಾಜರು ಇವುಗಳೆಲ್ಲವನ್ನೂ ಸ್ವಾಮಿ ವರದನ ಕೃಪೆಯಿಂದ ತಾವು ನೆರವೇರಿಸುತ್ತೇವೆಂದು ಪ್ರತಿಜ್ಞೆಯನ್ನು ಮಾಡಲು, ಆ ಮಡಿಸಿದ ಮೂರು ಬೆರಳುಗಳೂ ಬಿಟ್ಟುಹೋದವು. ಯತಿರಾಜರು ತಮಗೆ ಆಳವಂದಾರೊಂದಿಗೆ ಸಮಾಗಮಸಂಭಾಷಣೆಗಳು ಪ್ರಾಪ್ತವಾಗಲಿಲ್ಲವೇ ಎಂಬ ಕೊರತೆಯಿಂದ ಸ್ವಾಮಿಶ್ರೀರಂಗನಾಥನನ್ನು ಸೇವಿಸದೇ ಹಿಂತಿರುಗಿ ಕಾಂಚಿಗೆ ಬಂದು ಕಾಲಕ್ರಮೇಣ ಆಳವಂದಾರರ ಮೂರು ಕೋರಿಕೆಗಳನ್ನು ಪೂರ್ತಿಮಾಡಿದರು. ಶ್ರೀಆಳವಂದಾರವರಿಗೆ 'ವರರಂಗರೆಂದೂ, ಶೊಟ್ಟನಂಬಿ ಎಂದೂ ಇಬ್ಬರು ಮಕ್ಕಳು.

**ಶ್ರೀಭಾಷ್ಯಕಾರರ** ಚರಿತ್ರೆಯು ಸಂಸ್ಕೃತದಲ್ಲಿ ಶ್ರೀರಾಮಾನುಜದಾಸರವರಿಂದ ಪ್ರಪನ್ನಾಮೃತವೆಂಬ ಹೆಸರಿನಿಂದ ಬರೆಯಲ್ಪಟ್ಟದೆ. ಇದನ್ನು ಮಹನೀಯರು ಭಾಷಾಂತರಮಾಡಿರುತ್ತಾರಾಗಿ ಪುನಃ ಬರೆಯುವದು ಅವಶ್ಯಕವಿರುವದಿಲ್ಲವು. ಇದು ಹಳಗನ್ನಡ ಮಿಶ್ರವಾಗಿರುತ್ತದೆ. ಸಾವಧಾನದಿಂದ ಅವಲೋಕಿಸಿದರೆ ಅರ್ಥವಾಗಬಹುದು. ಹಳೆಗನ್ನಡವು ಅನೇಕರಿಗೆ ಅರ್ಥವಾಗುವದಿಲ್ಲವೆಂಬ ಅಭಿಪ್ರಾಯವಿರುವ ಹಾಗೆ ತೋರುತ್ತದೆ. ಅನುಕೂಲಿಸಿದರೆ ದಾಸನೂ ಬಂದು ಸಂಗ್ರಹಚರಿತ್ರೆಯನ್ನು ಬರೆಯುವೆನು.

**ಅರ್ಥ**—ಧೀಮಾನ್-ಬುದ್ಧಿಶಾಲಿಯಾದವನು, ಗುರುಂ-ತನಗೆ ಬ್ರಹ್ಮವಿದ್ಯಾದಾತೃವಾದ ಆಚಾರ್ಯನನ್ನು, ಪ್ರಕಾಶಯೇತ್-ಪ್ರಕಾಶಗೊಳಿಸತಕ್ಕದ್ದು. ಅಂದರೆ ಅವರ ಮಹಿಮೆಯನ್ನು ಕೊಂಡಾಡತಕ್ಕದ್ದು, ಮಂತ್ರಂ - ಅವರು ಉಪದೇಶಿಸಿದ ಮೂಲಮಂತ್ರ, ದ್ವಯ, ಚರಮ ಶ್ಲೋಕಗಳನ್ನು, ಯತ್ನೇನ - ಪ್ರಯತ್ನಪೂರ್ವಕವಾಗಿ, ಗೋಪ

1 ಶೇಷಸಂಹಿತೆ, ೧೪, ೫೦.

**ಗುರುವೈಯೊರುವಱ್ ಪ್ರಕಾಶಿಪ್ಪಿಕ್ಕಿರದುವುಂ, ಒರುವಱ್ ಪ್ರಕಾಶಿಪ್ಪಿಯಾದೊಳಿಗಿರುದುವುಂ ಗುರುಭಕ್ತಿಯಿಱ್ ತಾರತಮ್ಯತ್ತಾಲೆಯಿರೆ. ಭಗವದ್ವಿಷಯತ್ತಿಱ್ಪೋಲೆ ಗುರುವಿಷಯತ್ತಿಲುಂ[1] ಪರ್ಯ**

ಯೇತ್ - ಸಂರಕ್ಷಿಸತಕ್ಕದ್ದು, ಅಂದರೆ ಅಪಾತ್ರನಲ್ಲಿ ವಿನಿಯೋಗಿಸಿ ಅಂಥಾವರಿಗೆ ಉಪದೇಶಿಸತಕ್ಕದ್ದಲ್ಲವು, ಸಚ್ಛಿಷ್ಯನಿಗೇ ಉಪದೇಶಿಸತಕ್ಕದ್ದೆಂಬ ಭಾವವು. ಅಪ್ರಕಾಶಪ್ರಕಾಶಾಭ್ಯಾಂ - ಇದು ಕ್ರಮಾಲಂಕಾರವು, ಹಾಗೆ ಮಾಡದೆ ಗುರುವಿನ ಮಹಿಮೆಯನ್ನು ಪ್ರಕಾಶಪಡಿಸದಿದ್ದರೂ ಮತ್ತೂ ಮಂತ್ರವನ್ನು ಗೋಪ್ಯವಾಗಿಡದೆ ಸಿಕ್ಕಿದವರಿಗೆಲ್ಲಾ ಉಪದೇಶಿಸಿದರೂ, ಸಂಪದಾಯುಷೀ - ಸಂಪತ್ತೂ ಆಯುಸ್ಸೂ ಎರಡೂ, ಕ್ಷೀಯೇತೇ - ನಾಶಹೊಂದುತ್ತವೆ. (ಇಲ್ಲಿ ಸಂಪದಾಯುಷೀ ಎಂಬುವದನ್ನು ಕ್ರಮಾಲಂಕಾರವಾಗಿಟ್ಟುಕೊಂಡು ಗುರುವಿನ ಅಪ್ರಕಾಶದಿಂದ ಸಂಪತ್ತೂ ಮಂತ್ರಪ್ರಕಾಶದಿಂದ ಆಯುಸ್ಸೂ ಕ್ಷೀಣವಾಗುತ್ತೆಂಬದಾಗಿಯಾಗಲಿ ಅಥವಾ ಪ್ರತಿಯೊಂದರಿಂದಲೂ ಈ ಎರಡು ಅನರ್ಥಗಳೂ ಪ್ರಾಪ್ತವಾಗುತ್ತವೆಂಬದಾಗಿಯಾಗಲಿ ಅರ್ಥಹೇಳಬಹುದು. ಹಿಂದೆ ಗುರು ಹೇಗೆ ಅವಶ್ಯಕವೆಂದೂ ಆತನಲ್ಲಿ ಏಕೆ ಕೃತಜ್ಞತಾವಿರಬೇಕೆಂದು ಹೇಳಿ, ಈಗ ಹಾಗೆ ಗುರುವಿನಲ್ಲಿ ಕೃತಜ್ಞತಾಭಾವವಿಲ್ಲದಿದ್ದರೆ ಪ್ರತ್ಯವಾಯ ಉಂಟೆಂದು ಈ ಶ್ಲೋಕದಿಂದ ತಿಳಿಸುತ್ತಾರೆ. "ಸಂಪದಾಯುಷೀ" ಎಂಬುವದಕ್ಕೆ ಜ್ಞಾನಸಂಪತ್ತೂ ಮತ್ತೂ ಮಂತ್ರನಿಷ್ಠೆ ಎಂಬದಾಗಿ ವ್ಯಾಖ್ಯಾನ ಮಾಡಲ್ಪಟ್ಟಿರುತ್ತದೆ. ಬ್ರಹ್ಮವಿತ್ತಾದ ಪ್ರಪನ್ನನಿಗೆ ಐಹಿಕಸಂಪತ್ತೂ ಆಯುಸ್ಸುಗಳೂ ಬೇಕಾಗಿಲ್ಲವಾದುದರಿಂದ ಜ್ಞಾನಸಂಪತ್ತೇ ಮೊದಲಾದವೇ ಸಂಪದಾಯುಸ್ಸುಗಳೆಂದು ಭಾವಿಸತಕ್ಕದ್ದು.)

ಗುರುವನ್ನು ಒಬ್ಬ ಶಿಷ್ಯನು ಪ್ರಕಾಶಿಸುವಹಾಗೆ ಮಾಡುವದೂ, ಮತ್ತೊಬ್ಬ ಶಿಷ್ಯನು ಹಾಗೆ ಮಾಡದಿರುವದೂ ಅವರವರುಗಳಿಗೆ ಗುರುವಿನಲ್ಲಿರುವ ಭಕ್ತಿತಾರತಮ್ಯದಿಂದಲೇ ವಿನಾ, ಬೇರಿಲ್ಲವು. ದೇವಭಕ್ತಿ

---

1 ಪರ್ಯಯಾನ - ಅಧಿಕವಾದ.

**ಯಾನ ಭಕ್ತಿಯುಡೈಯನುಕ್ಕು ಅಪೇಕ್ಷಿತಾರ್ಥಂಗಳೆಲ್ಲಾಂ ಪ್ರಕಾಶಿಕ್ಕುಮೆನ್ನುಮಿಡಂ[2] ಕಠ ಜಾಬಾಲಾದಿ ಶ್ರುತಿಗಳಿಲುಂ ಸಂಜಯಾದಿ ವೃತ್ತಾಂತಗಳಿಲುಂ ಪ್ರಸಿದ್ಧಂ. ಇಂಗನನ್ನಾದಾರ್ಕ್ಕ**

---

ಯುಳ್ಳವನಿಗೆ ಹೇಗೋ ಹಾಗೆ ಶ್ರೇಷ್ಠವಾದ ಗುರುಭಕ್ತಿಯುಳ್ಳವನಿಗೂ ಕೂಡ, ಅಪೇಕ್ಷಿತಗಳಾದ ಸರ್ವಾಭೀಷ್ಟಗಳೂ ಪ್ರಕಾಶತೆಯನ್ನು ಹೊಂದುತ್ತವೆ, ಅಂದರೆ ಸಿದ್ಧಿಸುತ್ತವೆ ಎಂಬುವದು ಕಠಜಾಬಾಲಾದಿ ಶ್ರುತಿಪ್ರಮಾಣಗಳಿಂದಲೂ ಸಂಜಯ ಮೊದಲಾದ ವೃತ್ತಾಂತಗಳಿಂದಲೂ ಪ್ರಸಿದ್ಧವಾದ ವಿಷಯವು. ಹಾಗೆ ಗುರುವಿನ ವಿಷಯದಲ್ಲಿ ಅಂತಹ ಭಕ್ತಿ ಇಲ್ಲದೇ ಇರುವ ಶಿಷ್ಯರ ವಿಷಯದಲ್ಲಿ (ಭಕ್ತಿಯಿಂದಲೇ ಜ್ಞಾನವುಂಟಾಗುತ್ತದೆ, ಭಕ್ತಿಯಿಲ್ಲದಿದ್ದರೆ ಜ್ಞಾನವಿಲ್ಲವಾದುದರಿಂದ) ಜ್ಞಾನಸಂಪತ್ತುಂಟಾಗಲಾರದೆಂಬುವ ವಿಷಯವನ್ನು ಶಿಷ್ಯರುಗಳ ಜ್ಞಾನದಲ್ಲಿರುವ ತಾರತಮ್ಯಭಾವದಿಂದ ತಿಳಿದುಕೊಳ್ಳತಕ್ಕದ್ದು. (ಸಂಜಯವೃತ್ತಾಂತವು ಯಾವುದೆಂದರೆ—

ಶುದ್ಧಭಾವಂಗತೋ ಭಕ್ತ್ಯಾ ಶಾಸ್ತ್ರಾದ್ವೇದ್ಮಿ ಜನಾರ್ದನಂ ।
ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಂ ।
ಯೋಗಂಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಸ್ಸ್ವಯಂ ॥

---

2 ಕಠಶ್ರುತಿ—"ಯಸ್ಯದೇವೇ ಪರಾಭಕ್ತಿರ್ಯಥಾದೇವೇ ತಥಾಗುರೌ । ತಸ್ಯೈತೇ ಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥" ಯಾವ ಮಹಾತ್ಮನಿಗೆ ದೇವರಲ್ಲಿ ಪರಾಭಕ್ತಿ ಇರುತ್ತದೆಯೋ ಮತ್ತು ಯಾವನಿಗೆ ದೇವರಲ್ಲಿರುವ ಹಾಗೆಯೇ ಗುರುವಿನಲ್ಲೂ ಭಕ್ತಿಯಿರುತ್ತದೆಯೋ ಅಂತವನಿಗೆ ಯಾವ ಯಾವ ಪುರುಷಾರ್ಥಗಳು ಹೇಳಲ್ಪಟ್ಟಿರುವವೋ ಅವೆಲ್ಲವೂ ಪ್ರಕಾಶಿಸುತ್ತವೆ, ಅಂದರೆ ಸಿದ್ಧಿಸುತ್ತವೆ ಎಂದು ಹೇಳಿರುತ್ತದೆ. ಪರಭಕ್ತಿ ಎಂದರೆ ಶಾಸ್ತ್ರಮುಖದಿಂದ ತಿಳಿದ ವಿಷಯವನ್ನು ಈಗಲೇ ಕಾಣಬೇಕೆಂಬ ಇಚ್ಛೆಯುಳ್ಳ ಭಕ್ತಿಯು. ಜಾಬಾಲ ಶ್ರುತಿಯು ಹೇಳುತ್ತದೆ :—"ಆಚಾರ್ಯಾದ್ಧೈವವಿದ್ಯಾ ವಿದಿತಾಸಾಧಿಷ್ಠಂ ಪ್ರಾಪತ್" ಅಂದರೆ ಆಚಾರ್ಯರಿಂದ ಉಪದೇಶಿಸಲ್ಪಟ್ಟ ವಿದ್ಯೆಯೇ ಪ್ರಾಶಸ್ತ್ಯವನ್ನು ಹೊಂದುತ್ತದೆ.

---

**ಇಪ್ಪಡಿಜ್ಞಾನಸಂಪತ್ತುಂಡಾಗಾದೆನ್ನುಮಿಡಂಶಿಷ್ಯರ್ಗಳುಡೈಯ ಜ್ಞಾನತಾರತಮ್ಯತ್ತಾಲೆ ಕಂಡುಕೊಳ್ಳುಮ. ಮಿಕವುಂ ಗುಣಾಧಿಕರಾನ ಶಿಷ್ಯರ್ಗಳುಕ್ಕುಂ ಕಡುಗ ಅಧ್ಯಾತ್ಮವಿಷಯಂಗಳೈ ಪ್ರಕಾಶಿಪ್ಪಿಯೊದಾಕರ್ನಿಷ್ಕೃಕಾಲ್ಲೈಯಾದೆನ್ನುಮಿಡಂ[1] ರೈಕ್ವಾದಿವೃತ್ತಾಂತಗಳಿಲೆ ಪ್ರಸಿದ್ಧಂ. ಪೆತ್ತದು[3] ಗುಣವಾಕ**

---

ವ್ಯಾಸಮಹರ್ಷಿಯ ಪರಿಪೂರ್ಣಾನುಗ್ರಹದಿಂದ ಶ್ರೇಷ್ಠವಾದ ರಹಸ್ಯಾರ್ಥಗಳನ್ನು ಗ್ರಹಿಸಿದವನಾಗಿ, ಭಕ್ತಿಯ ಮಾಹಾತ್ಮ್ಯದಿಂದ ಪರಿಶುದ್ಧಭಾವವನ್ನು ಹೊಂದಿದವನಾಗಿ, ಶಾಸ್ತ್ರೋಪದೇಶದಿಂದ ಜನಾರ್ದನನಾದ ಸ್ವಾಮಿಯನ್ನು ಸಾಕ್ಷಾತ್ಕರಿಸಿದೆನು. ತಾನೇ ಸಾಕ್ಷಾತ್ತಾಗಿ ಉಪದೇಶಿಸುವ ಯೋಗಕ್ಕೆಲ್ಲಾ ಈಶ್ವರನೆನಿಸುವ ಶ್ರೀಕೃಷ್ಣನಿಂದ ಯೋಗವನ್ನೂ ಸಾಕ್ಷಾತ್ಕರಿಸಿದೆನು" ಎಂಬುವದರಿಂದಲೂ ಗುರುವಿನಲ್ಲಿ ತೋರುವ ಭಕ್ತಿಯಿಂದಲೇ ಜ್ಞಾನಸಂಪತ್ತೆಂಬುದು ವ್ಯಕ್ತಪಡುತ್ತದೆ. ಜ್ಞಾನತಾರತಮ್ಯವು ಶಿಷ್ಯರುಗಳು ಕೇಳಿ ತಿಳಿಯುವದರಲ್ಲಿನ ತಾರತಮ್ಯದಿಂದಲ್ಲವೇ ಉಂಟಾಗತಕ್ಕದ್ದು ಎಂದರೆ, ಹಾಗಲ್ಲವು. ಜ್ಞಾನ ತಾರತಮ್ಯಕ್ಕೆ ಗುರುಭಕ್ತಿಯಲ್ಲಿರುವ ವ್ಯತ್ಯಾಸವೇ ಕಾರಣವೆಂಬದಾಗಿ "ಇಂಗನಲ್ಲಾರಕ್ಕು" ಎಂಬ ವಾಕ್ಯದಿಂದ ಸಮರ್ಥನಮಾಡಿ ಹೇಳಿರುತ್ತಾರೆ.) ಇನ್ನು ಗುರುವಿನ ಅಪ್ರಕಾಶ, ಮಂತ್ರಪ್ರಕಾಶಗಳಿಂದ ಸಂಪದಾಯಸ್ಸುಗಳು ಕ್ಷೀಣವಾಗುತ್ತವೆಯಾದುದರಿಂದ ಶಿಷ್ಯನನ್ನು ಪರೀಕ್ಷಿಸಿ, ಯೋಗ್ಯನಾದ ಸಚ್ಛಿಷ್ಯನಿಗೇನೇ ಬ್ರಹ್ಮಜ್ಞಾನ ಮಂತ್ರೋಪದೇಶಗಳನ್ನು ಉಪದೇಶಿಸತಕ್ಕದ್ದೆಂಬುವದನ್ನು ಉದಹರಿಸಿರುತ್ತಾರೆ. "ಆದರೆ ಆಚಾರ್ಯೋಽಪ್ಯನಾಚಾರ್ಯೋಽಭವತಿ ಶ್ರುತಾತ್ಪರಿಹರಮಾಣಃ" ಅಂದರೆ ಕೇಳಿ ತಿಳಿಯಬೇಕೆಂಬವನಿಗೆ ತಿಳಿಸದೇ ಇರುವ ಆಚಾರ್ಯನು ಅನಾಚಾರ್ಯನೆನಿಸುವನು ಎಂಬದಾಗಿ ಹೇಳಿದೆಯ

---

1 ಕಡುಕ - ಶೀಘ್ರವಾಗಿ. 2 ಭಕ್ತದ್ವೇಷಿಗಳನ್ನು ಮರ್ದನಮಾಡುವವನು.
3 ಪೆತ್ತದು - ಬಂದು ಆಶ್ರಯಿಸಿದ್ದು.

ಉಪದೇಶಿಕ್ಕಾಲ್ "ಶಿಷ್ಯಪಾಪಂ ಗುರೋರಪಿ" ಎನ್ಕೈಯಾಲೇಆಚಾರ್ಯ

ಲ್ಲ, ಕೆಲವು ಶಿಷ್ಯರುಗಳನ್ನು ತಿರಸ್ಕರಿಸಬಹುದೇ ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಾರೆ. ಅತ್ಯಂತ ಗುಣಾಧಿಕರಾದ ಶಿಷ್ಯರುಗಳಿಗೂ ಕೂಡ ಬಂದುವೇಳೆ ಅಧ್ಯಾತ್ಮವಿದ್ಯೆಯನ್ನು ಬಡನೆ ಉಪದೇಶಿಸದೇ ಇರುವ ಗುರುವಿಗೂ ಕೂಡ ಸಿಷ್ಠೆಯನೂ (ಆಯುಸ್ಸು) ಕಮ್ಮಿಯಾಗುವದಿಲ್ಲವೆಂಬಂಶವು ರೈಕ್ವರೇ ಮೊದಲಾದವರುಗಳ ವೃತ್ತಾಂತದಿಂದ ಪ್ರಸಿದ್ಧವಾದುದು.

ರೈಕ್ವರ ವೃತ್ತಾಂತವು—ಇದು ಛಾಂದೋಗ್ಯೋಪನಿಷತ್ತಿನಲ್ಲಿ ಬರುತ್ತದೆ. ಜಾನುಶ್ರುತಿಯೆಂಬ ಸಾರ್ವಭೌಮನು ತನ್ನ ರಾಜ್ಯದಲ್ಲಿ ಯಾರೊಬ್ಬರೂ ಅನ್ನಪಾನಾದಿಗಳಿಲ್ಲದೆ ಕ್ಲೇಶಪಡಕೂಡದೆಂಬಭಿಪ್ರಾಯದಿಂದ ಸರ್ವರಿಗೂ ವೃತ್ತಿಗಳನ್ನು ಕಲ್ಪಿಸಿ ಬಹುಧರ್ಮಿಷ್ಠನಾಗಿ ರಾಜ್ಯಪರಿಪಾಲನೆಮಾಡುತ್ತಿದ್ದನು. ಇಂಥಾವನಿಗೆ ಬ್ರಹ್ಮವಿದ್ಯೆಯಿಲ್ಲದೆಯೂ ಅದರಿಂದ ಮೋಕ್ಷಪ್ರಾಪ್ತಿಯಿಲ್ಲದೆಯೂ ಇರತಕ್ಕದ್ದು ಸರಿಯಲ್ಲವೆಂದು ಕೃಪಾಸಾಗರನು ತಾನೇ ಉಪಾಯಮಾದುದರಿಂದ, ಇಬ್ಬರು ಋಷಿಗಳು ಹಂಸವೇಷವನ್ನು ತಾಳಿ ಜಾನುಶ್ರುತಿಯ ಹತ್ತಿರ ಹೋಗುವಹಾಗೆ ಸ್ವಾಮಿಯೇ ಪ್ರೇರೇಪಿಸಿದನು. ಆ ಇಬ್ಬರು ಋಷಿಗಳೂ ಆ ರಾಜನು ಅನ್ನದಾನಮಾಡುವ ಸಂಭ್ರಮದಿಂದ ಹರ್ಷಿತರಾಗಿ, ಆ ರಾಜನಿಗೆ ತಿಳಿಯದ ಹಾಗೆ ಈ ಹಂಸವೇಷವನ್ನು ತಾಳಿದವರಾಗಿ, ಅದರಲ್ಲೊಂದು ಹಂಸವು, ತನ್ನ ಸ್ನೇಹಿತನನ್ನು ಕುರಿತು "ಓ ಭಲ್ಲಾಕ್ಷನೇ,ಆ ಜಾನುಶ್ರುತಿಯ ತೇಜಸ್ಸು ಎಷ್ಟು ಪ್ರಕಾಶವಾದುದು, ನೀನುಹತ್ತಿರಹೋಗಬೇಡ ನಿನ್ನನ್ನು ದಹಿಸಬಿಟ್ಟೀತು" ಎನ್ನಲು, ಅದಕ್ಕೆ ಇನ್ನೊಂದು ಹಂಸವು ನಕ್ಕು "ಓ ಸ್ನೇಹಿತನೇ, ಈ ಐಹಿಕದಲ್ಲೇ ಮಗ್ನನಾದವನ ತೇಜಸ್ಸು ನನಾಗೇನು ಮಾಡೀತು. ರೈಕ್ವರಾದರೆ ಕರ್ಮಜ್ಞಾನಗಳೆರಡರಿಂದುಂಟಾಗುವ ಸಂಪತ್ತನ್ನು

1 ಮನುಧರ್ಮಶಾಸ್ತ್ರ.

**ನಕ್ಕು ನಿಷ್ಕೃಷ್ಟ ಕುಲ್ಲೈಯುಂಪಡಿಯಾ[1] ಮೆನ್ನುಮಿಥಂ ವರು**
**ವದು ವಿಚಾರಿಯಾದೇ ಇಂದ್ರನಕ್ಕು ಉಪದೇಶಿತ್ತು ತಾನುಂ**

ಪತದನರು, ಈ ರಾಜನಾದರೋ ಆ ರೈಕ್ವರ ಹಾಗೆ ಬ್ರಹ್ಮವಿತ್ತೇ, ಈತನ ತೇಜಸ್ಸು ಏನುಮಾಡೀತೆಂದು ರಾಜನನ್ನು ಬಹುನಿಕೃಷ್ಟವಾಗಿ ಹೇಳಲು", ಈ ಹಂಸಗಳ ಸಂವಾದವನ್ನು ಕೇಳಿದ ರಾಜನು ಈ ನಿಕೃಷ್ಟವಾಕ್ಯದಿಂದ ಬ್ರಹ್ಮಜ್ಞಾನ ತನಗಿಲ್ಲವೇ ಎಂಬ ಶೋಕವು ಹುಟ್ಟಿ ಒಡನೇ ತನ್ನ ಸಾರಥಿಯನ್ನು ಕರೆದು ರೈಕ್ವರನ್ನು ಕಂಡುಹಿಡಿಯುವ ಹಾಗೆ ಹೇಳಿಕಳುಹಿಸಿ, ಅವರಿರುವ ಸ್ಥಳವನ್ನು ತಿಳಿದು, ಅನೇಕ ಗೋಗಳು, ಹಾರ, ಹೇಸರಕತ್ತೆಗಳು ಕಟ್ಟಿದ ರಥ ಮುಂತಾದವುಗಳನ್ನು ಆ ರೈಕ್ವರಿಗೆ ಗುರುದಕ್ಷಿಣೆಯಾಗಿ ಸಮರ್ಪಿಸಿ, ಬ್ರಹ್ಮಜ್ಞಾನೋಪದೇಶವನ್ನು ಪ್ರಾರ್ಥಿಸಲು. ಆ ಮಹರ್ಷಿಯು ತನ್ನ ಜ್ಞಾನ ಚಕ್ಷುಸ್ಸಿನಿಂದ ಈ ಮಹನೀಯನಾದ ಶಿಷ್ಯನಿಗೆ ಬ್ರಹ್ಮಜ್ಞಾನವಿಲ್ಲದ ಶೋಕ ಉತ್ಪನ್ನವಾದುದರಿಂದ ಆತನನ್ನು ಶೂದ್ರ (ಅಂದರೆ ಶೋಕಾಕುಲನೆಂದು ಭಾವವು) ಎಂದು ಸಂಬೋಧನೆಮಾಡಿ, ಯಾವಾಗ ವಿದ್ಯೆಯಿಲ್ಲವೆ ಎಂಬ ಶೋಕವು ಹುಟ್ಟಿತೋ ಆಗ ಈತನು ಕ್ಷತ್ರಿಯನಾಗಿ ತ್ರೈವರ್ಣಾದವರಲ್ಲಿ ಸೇರಿರುವದರಿಂದ ಅಧ್ಯಾತ್ಮವಿದ್ಯೆಯನ್ನಧಿಕರಿಸಲು ಅಧಿಕಾರವಿದ್ದರೂ ಗುರುದಕ್ಷಿಣೆಯನ್ನು ಸಮರ್ಪಿಸಿದುದು ಆ ರಾಜನ ಅಂತಸ್ಥಿಗೆ ಯೋಗ್ಯವಾದುದಲ್ಲವಾದುದರಿಂದ, ಆ ರಾಜನನ್ನು ಕುರಿತು ಈ ಹಾರಗೋವುಗಳು ಮುಂತಾದವು ನಿನಗೇ ಇರಲಿ ಎನ್ನಲು, ಜಾನುಶ್ರುತಿಯು ಪುನಃ ಇನ್ನೂ ಹೆಚ್ಚು ಆಕಳುಗಳನ್ನೂ ವಿಪುಳಧನವನ್ನೂ, ತನ್ನ ಮಗಳನ್ನೂ ತಂದು ಸಮರ್ಪಿಸಿ, ಪುನಃ ಉಪಸರ್ಪಣೆಮಾಡಿದರು. ಅದನ್ನು ರೈಕ್ವರು ಸ್ವೀಕರಿಸಿದವರಾಗಿ ಜಾನುಶ್ರುತಿಯನ್ನು ಕುರಿತು ನೀನು ಗುರುಶುಶ್ರೂಷೆಯನ್ನು ಮಾಡದೇ ಇದ್ದರೂ ಅದಕ್ಕೆ ಬದಲಾಗಿ ಈ ಗುರುದಕ್ಷಿಣೆ ತಂದಿದ್ದರಿಂದ ನಿನಗೆ ಅಧಿಕಾರ ಉಂಟಾಯಿತೆಂದು ಹೇಳಿ ಬ್ರ

2 ಕುಲ್ಲೈಯುಂಪಡಿಯಾಂ - ಕ್ಷೀಣವಾಗುವದು.

**ಬ್ರಹ್ಮವಿದ್ಯೆಯನ್ನು ಪರಂದು ತಚ್ಛಿಷ್ಯನಾನ ನಾರದಭಗವಾನ್ನೈ ಯಿಟ್ಟು ಸರ್ವೇಶ್ವರನುಣರ್ತ್ತಿ ವಿಕ್ಕವೇಂಡುಂಪಡಿ ಯಿರುಂದ ಚತುರ್ಮುಖನ್ ಪಕ್ಕಲಿಲೆ ಕಂಡುಕೊಳ್ವದು. ಇಪ್ಪಡಿ “ಅಪ್ರಕಾಶಪ್ರಕಾಶಾಭ್ಯಾ” ಮೆಂಗಿರವಿರಂಡುಕ್ಕುಂ “ಕ್ಷೀಯೇತಿ ಸಂಪ**

ಹ್ಮವಿದ್ಯೆಯನ್ನು ಉಪದೇಶಮಾಡಿದರು. ರೈಕ್ವರು ಮೊದಲುಸಲ ಜಾನುಶ್ರುತಿಗೆ ಉಪದೇಶಿಸದಿದ್ದರೂ ರೈಕ್ವರಮಹಿಮೆಗೆ ಏನೊಂದೂ ಪ್ರತ್ಯವಾಯ ಉಂಟಾಗಲಿಲ್ಲವೆಂಬುವದನ್ನು ಈ ವೃತ್ತಾಂತವು ಸೂಚಿಸುತ್ತದೆ. ಆದುದರಿಂದ “ಪರೀಕ್ಷ್ಯವಿವಿಧೋಪಾಯೈಃ ಕೃಪಯಾನಿಸ್ಪೃಹೋವದೇತ್” ಅಂದರೆ ಆಚಾರ್ಯನಾದವನು ಶಿಷ್ಯನನ್ನು ಸರ್ವಪ್ರಕಾರದಿಂದಲೂ ಚನ್ನಾಗಿ ಪರೀಕ್ಷಿಸಿ ಆತನು ಯೋಗ್ಯನಾಗಿ ಬ್ರಹ್ಮವಿದ್ಯೆಗೆ ಅರ್ಹನಾಗಿದ್ದಪಕ್ಷದಲ್ಲಿ ಅವನಲ್ಲಿ ತುಂಬಾ ಕೃಪೆಯನ್ನು ತೋರಿ ಪ್ರತಿಫಲವೇನನ್ನೂ ಅಪೇಕ್ಷಿಸದೆ ಆತನಿಗೆ ಉಪದೇಶಿಸತಕ್ಕದ್ದು. (ಇನ್ನು ಮುಂದೆ ಶಿಷ್ಯನಪ್ರಾರ್ಥನೇಮೇರಿಗೆ, ಪರೀಕ್ಷಿಸದೇ ಅಪಾತ್ರನಾದವನಿಗೆ ಬ್ರಹ್ಮವಿದ್ಯೆ ಉಪದೇಶಿಸಿದರೆ ಪ್ರತ್ಯವಾಯ ಉಂಟೆಂದು ನಿದರ್ಶನಪೂರ್ವಕ “ಪೆತ್ತದು” ಎಂಬದಾಗಿ ಆರಂಭಿಸಿ ಸಮರ್ಥನ ಮಾಡುತ್ತಾರೆ.) ಬಂದು ಆಶ್ರಯಿಸಿದುದನ್ನೇ ಒಂದು ಗುಣವೆಂದು ಭಾವಿಸಿ, ಬಂದವನನ್ನು ಚನ್ನಾಗಿ ಪರೀಕ್ಷಿಸದೆ ಉಪದೇಶಿಸಿದರೆ,

ರಾಜ್ಞೋರಾಷ್ಟ್ರಕೃತಂಪಾಪಂ ರಾಜಪಾಪಂ ಪುರೋಧಸಃ ।
ಭರ್ತುಸ್ಸ್ವಸ್ತ್ರೀಕೃತಂಪಾಪಂ ಶಿಷ್ಯಪಾಪಂ ಗುರೋರಪಿ ॥

ಅಂದರೆ ರಾಷ್ಟ್ರದಜನಗಳು ಮಾಡಿದಪಾಪವು ರಾಜನಿಗೂ, ರಾಜನ ಪಾಪವು ಆತನ ಪುರೋಹಿತನಿಗೂ, ಸ್ತ್ರೀಮಾಡಿದ ಪಾಪವು ಗಂಡನಿಗೂ, ಶಿಷ್ಯನ ಪಾಪವು ಗುರುವಿಗೂ ಸಂಬಂಧಿಸುತ್ತವೆ ಎಂದು ಹೇಳಿ

**1 ಉಣರ್ತ್ತಿವಿಕ್ಕವೇಂಡುಪಡಿ-ಹೇಗೆ ಪುನಃ ಸ್ಮೃತಿಯುಂಟಾದೀತೋ ಹಾಗೆ.**

**ದಾಯುಷೀ ” ಎಂಗಿರಫಲಂಗಳ್ಳೈ ಔಚಿತ್ಯತ್ತಾಲುಂ, ಪ್ರಮಾಣ ಪ್ರಸಿದ್ಧಿಯಾಲುಂ ಕ್ರಮತ್ತಾಲೇ: ಉದಾಹರಿತ್ತವಿತ್ತನ್ನೈ. ಇರಂಡಿಲು ಮುರಂಡುಫಲಮನ್ನಿಯುತ್ತಾಲುಂ ವಾಕ್ಯತ್ತಿಲ್ ಒರುಂ ವಿರೋಧಮಿಲ್ಲೈ.**

ರುವದರಿಂದ, ಆಚಾರ್ಯನ ನಿಷ್ಠೆಯು (ಇದೇ ಆತನ ಸಂಪದಾಯು ಸ್ಸುಗಳು) ನಾಶವಾಗುವದು ಎಂಬುವದನ್ನು, ಇಂದ್ರನು ಬಂದು ಆಶ್ರಯಿಸಿದ ಒಡನೆಯೇ ಸರಿಯಾಗಿ ವಿಚಾರಿಸದೆ ಚತುರ್ಮುಖಬ್ರಹ್ಮನು ಆತನಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಿದುದರಿಂದ ಚತುರ್ಮುಖನಿಗೆ ತನ್ನ ಬ್ರಹ್ಮವಿದ್ಯೆಯೆಲ್ಲಾ ಮರತುಹೋಗಿ ಸರ್ವೇಶ್ವರನು ಹೇಗೆ ಜ್ಞಾನವನ್ನು ಕೊಟ್ಟಾನೋ ಎಂಬಪೇಕ್ಷೆಯಲ್ಲಿದ್ದು ತನ್ನ ಶಿಷ್ಯನಾದ ನಾರದ ಮಹರ್ಷಿಯಮೂಲಕ ಪುನಃ ಪಡೆದನೆಂಬೀ ಚತುರ್ಮುಖವೃತ್ತಾಂತದಿಂದ ತಿಳಿದುಕೊಳ್ಳಬಹುದು. (ಇಂದ್ರನು ಸ್ವರ್ಗಭೋಗದಲ್ಲಿ ಮಮತೆಯುಳ್ಳವನಾಗಿಯೂ ಬ್ರಹ್ಮಜ್ಞಾನದಲ್ಲಿ ತುಂಬಾ ಆಸಕ್ತಿ ಇಲ್ಲದೆ ವಿರಕ್ತಿಭಾವಶೂನ್ಯನಾಗಿದ್ದುದರಿಂದ ಅಂಥಾವನಿಗೆ ವಿಚಾರಮಾಡದೇ ಚತುರ್ಮುಖನು ಉಪದೇಶಿಸಿದನಾದುದರಿಂದ, ಆ ಬ್ರಹ್ಮವಿದ್ಯೆಯೆಲ್ಲಾ ಆತನಿಗೆ ಮರೆತುಹೋಗಿ, ತನ್ನ ಮಗನಾದ ನಾರದಮಹರ್ಷಿಯಿಂದ

1 ಔಚಿತ್ಯತ್ತಾಲುಂ—ಇಲ್ಲಿ ಔಚಿತ್ಯ ಯಾವದು ಎಂದರೆ ಶ್ಲೋಕದಲ್ಲಿ “ ಗುರುಂ ಪ್ರಕಾಶಯೇತ್ ” ಮತ್ತು “ ಮಂತ್ರಂಗೋಪಯೇತ್ ” ಎಂದು ಎರಡು ವಿಧಿವಚನಗಳಿರುವದರಿಂದ ಅವುಗಳನ್ನು ಉಲ್ಲಂಘಿಸಿದರೆ ಕ್ರಮವಾಗಿ ಜ್ಞಾನಸಂಪತ್ತು ಮತ್ತು ನಿಷ್ಠೆಯ ನಾಶವು ಒಂದರಿಂದ ಒಂದು ಪ್ರಾಪ್ತವಾಗುತ್ತದೆಂದು ಅರ್ಥಹೇಳುವದು ಉಚಿತವೆಂದು ಭಾವವು. ಕಠಜಾಬಾಲಿಶ್ರುತಿಪ್ರಮಾಣಗಳಿಂದಲೂ. ರೈಕ್ವ, ಸಂಜಯಾಶ್ವಲಾಯನ, ಚತುರ್ಮುಖವೃತ್ತಾಂತಗಳ ಪ್ರಮಾಣಗಳಿಂದಲೂ ಹೀಗೆ ಅರ್ಥಮಾಡುವದು ನ್ಯಾಯವೆಂಬದಾಗಿ “ ಪ್ರಮಾಣ ಪ್ರಸಿದ್ಧಿಯಾಲುಂ ” ಎಂದು ಅಪ್ಪಣೆ ಕೊಡಿಸಿರುತ್ತಾರೆ.

ಅಕ್ಕೆಯೂಲ್ ಸರ್ವಾವಸ್ಥೈಯಿಲುಂ ಗುರುಭಕ್ತಿಯೇರ್ ಪರೀ
ವಾಹಮಾಕ ಗುರುವೈಪ್ರಕಾಶಿಕ್ಕಪ್ಪುಂ, ಮಹಾರತ್ನಗರ್ಭಮಾ
ನವಾಣಿಕ್ಕ ಚ್ಚೊಪ್ಪುವಪೋಲೆ ಇರುಕ್ಕರತಿರುಮಂತ್ರತ್ತಿನುಡೈಯ

ಪುನಃ ಉಪದೇಶಹೊಂದಿ ಬ್ರಹ್ಮವಿತ್ತಾದನು ಎಂದು ಬೃಹನ್ನಾರದೀಯ ಉಪಾಖ್ಯಾನವಿರುತ್ತದೆ.)

ಹೀಗೆ ಗುರುವನ್ನು ಪ್ರಕಾಶವಮಾಡದಿರುವದೂ, ಮಂತ್ರವನ್ನು ಪ್ರಕಾಶಮಾಡಿ ಬಹಿರಂಗ ಪಡಿಸುವದೂ ಎನ್ನುವ ಈ ಎರಡಕ್ಕೂ ಜ್ಞಾನಸಂಪತ್ತೂ ನಿಷ್ಠೆಯೂ ನಾಶವಾಗುವವು ಎಂಬ ಫಲಗಳು ಔಚಿತ್ಯವನ್ನು ಹೇಳುವದಕ್ಕಾಗಿಯೂ ಪ್ರಮಾಣಪ್ರಸಿದ್ಧಿ ಇರುವದರಿಂದಲೂ ಕ್ರಮವಾಗಿ ಗುರುವಿನ ಅಪ್ರಕಾಶಕ್ಕೆ ಜ್ಞಾನಸಂಪತ್ತಿನ ಕ್ಷೀಣತೆಯನ್ನೂ, ಮಂತ್ರಪ್ರಕಾಶಕ್ಕೆ ನಿಷ್ಠೆಯ ಕ್ಷೀಣತೆಯನ್ನೂ ಉದಾಹರಿಸಿದೆವೇ ವಿನಾ ಬೇರೆ ಇಲ್ಲವು. ಆದರೆ ಈ ಎರಡಕ್ಕೂ ಈ ಎರಡು ಫಲಗಳೂ ಉಂಟು ಎಂದರೆ ಗುರುವಿನ ಅಪ್ರಕಾಶದಿಂದ ಸಂಪದಾಯುಸ್ಸುಗಳ ಕ್ಷೀಣತೆಯೂ, ಹಾಗೆಯೇ ಮಂತ್ರಪ್ರಕಾಶದಿಂದಲೂ ಈ ಎರಡು ಫಲಗಳೂ ಸಂಭವಿಸುತ್ತವೆಂಬದಾಗಿ ಹೇಳಿ ಅನ್ವಯಿಸಿದರೂ ವಾಕ್ಯದಲ್ಲಿ ಏನೂ ವಿರೋಧ ಉಂಟಾಗುವದಿಲ್ಲವು.

ಆದುದರಿಂದ ಎಲ್ಲಾ ಅವಸ್ಥೆಗಳಲ್ಲೂ (ಅಂದರೆ ಜ್ಞಾನ ಉಂಟಾಗುವದಕ್ಕೆ ಮುಂಚಿತವಾಗಿಯೂ, ಜ್ಞಾನೋತ್ಪತ್ತಿಯುಂಟಾಗಿ ವೃದ್ಧಿಯಾಗುವ ಅವಸ್ಥೆಯಲ್ಲೂ, ತದನಂತರಾವಸ್ಥೆಯಾದ ಪ್ರಾರಬ್ಧಮೂಲಕ ಉಂಟಾಗುವ ಹರ್ಷ ಶೋಕಾವಸ್ಥೆ ಇವುಗಳಲ್ಲೆಲ್ಲಾ) ಸಂಪೂರ್ಣವಾದ ಗುರುಭಕ್ತಿಯು ಹೆಚ್ಚಿ ಪ್ರವಹಿಸುವ ಹಾಗೆ ಗುರುವನ್ನು ಪ್ರಕಾಶಗೊಳಿಸತಕ್ಕದ್ದು. (ಗುರುಭಕ್ತಿಯಿಂದಲೇ ಜ್ಞಾನೋತ್ಪತ್ತಿಯೆಂಬ ಭಾವವು. ಅನಂತರ ಗುರುಭಕ್ತಿ ಏತಕ್ಕೆಂದರೆ, ಜ್ಞಾನವು ಕಮ್ಮಿಯಾಗದೆ ವೃದ್ಧಿಹೊಂದುವದಕ್ಕಾಗಿ ಎಂಬ ಭಾವವು. ಹಾಗೆ ಜ್ಞಾನವು ವೃದ್ಧಿಹೊಂದಿ ಉಪಾಯಾನುಷ್ಠಾನಮಾಡಿ ಕೃತಕೃತ್ಯತೆಯನ್ನು ಹೊಂದಿದನಂತರವೂ ಗುರುಭಕ್ತಿ ಏಕೆಂದರೆ ಕೃತಜ್ಞತಾಸೂಚಕವಾಗಿಯೂಪುನಃ

**ಶೀರ್ಷ್ಮೈಯುಂ[1] ತನ್ನಿಷ್ಠೈಯುಂ ಕುಲೈಯಾನ್ಮೈಕ್ಕಾಕಚ್ಚಿಲ್[2] ವಾನಪ್ರಯೋಜನಂಗಳೈಪತ್ತಿಶಿಷ್ಯಗುಣಪೂರ್ತಿಯಿಲ್ಲಾದಚಪಲರ್ಕ್ಕು ವೆಳಿಯಿಡಾದೆ ಮಂತ್ರತ್ತೈ ಮಿಕವುಂ ಶಿಮಿಕ್ಕವುಮ್[3] ಪ್ರಾಪ್ತಂ. ಇವ್ವಿಡತ್ತಿಲ್ ಗುರುಶಬ್ದಂ ಪರಮಗುರುಕ್ಕಳುಕ್ಕುಮುಪಲಕ್ಷಣಂ.**

ಅಜ್ಞಾನಪ್ರಾಪ್ತವಾಗಿ ಉತ್ತರಾಘ ಸಂಘಟನೆ ಇಲ್ಲದಿರುವದಕ್ಕಾಗಿ ಎಂದು ಭಾವಿಸತಕ್ಕದ್ದು. ಆದುದರಿಂದ ಗುರುಭಕ್ತಿಯಿಂದ ಗುರುಪ್ರಕಾಶವು ಸರ್ವಾವಸ್ಥೆಯಲ್ಲೂ ಅವಶ್ಯಕವೆಂಬ ಭಾವವು.) ಮತ್ತು ಶ್ರೇಷ್ಠತಮವಾದ ರತ್ನವನ್ನು ಗರ್ಭೀಕರಿಸಿರುವ ಮಾಣಿಕ್ಯಸಂಪುಟದೋಪಾದಿಯಲ್ಲಿ ಸಾರತಮವಾದುದನ್ನೆಲ್ಲಾ ಒಳಗೊಂಡಿರುವ ಮೂಲಮಂತ್ರದ ಮಹಿಮೆಯೂ, ಉಪದೇಶಿಸುವ ಗುರುವಿನ ನಿಷ್ಠೆಯೂ, ಎರಡೂ ಕಮ್ಮಿಯಾಗದೇ ಇರುವದಕ್ಕಾಗಿ ಖ್ಯಾತಿಯೋ ಇಲ್ಲವೇ ಇನ್ನ್ಯಾವದೋ ಕ್ಷುದ್ರವಾದ ಅಥವಾ ಅಲ್ಪವಾದ ಪ್ರಯೋಜನಂಗಳಿಗಾಗಿ ಸಚ್ಛಿಷ್ಯನಲ್ಲಿ ಯಾವ ಗುಣವಿರಬೇಕೋ ಅಂತಹ ಗುಣಗಳು ಪೂರ್ಣವಾಗಿರದೇ ಇರುವ ಚಪಲ ಮನಸ್ಕರಾದ ಶಿಷ್ಯರಿಗೆ ಇಂತಹ ಅಮೋಘ ಮಂತ್ರವನ್ನುಪದೇಶಿಸಿ ಬಹಿರಂಗಪಡಿಸದೆ, ಗೋಪ್ಯವಾಗಿಡತಕ್ಕದ್ದು ಮುಖ್ಯಕರ್ತವ್ಯವು. (ಗುರುವಿನಲ್ಲೂ ಮಂತ್ರದಲ್ಲೂ ತುಂಬಾ ವಿಶ್ವಾಸವಿಡತಕ್ಕದ್ದೆಂಬುವದಕ್ಕೆ ಅನೇಕ ಪ್ರಮಾಣಗಳುಂಟು.

ಮಂತ್ರೇತದ್ದೇವತಾಯಾಂಚ ತಥಾಮಂತ್ರಪ್ರದೇ ಗುರೌ ।
ತ್ರಿಷುಭಕ್ತಿಸ್ಸದಾ ಕಾರ್ಯಾ ಸಾಹಿ ಪ್ರಥಮಸಾಧನಂ ॥

ಮಂತ್ರದಲ್ಲಿಯೂ ಆ ಮಂತ್ರಾಭಿಮಾನದೇವತೆಯಲ್ಲಿಯೂ, ಆ ಮಂತ್ರವನ್ನುಪದೇಶಿಸಿದ ಗುರುವಿನಲ್ಲಿಯೂ ಭಕ್ತಿಯಿರಬೇಕು, ಆ ಭಕ್ತಿಯೇ ಮುಖ್ಯಸಾಧನವು. ಮತ್ತು

1 ಶೀರ್ಷ್ಮೈ - ಮಹಿಮೆ. 2 ಚೀಲ್ವಾನ - ಕೆಲವುಕ್ಷುದ್ರಗಳಾದ.
3 ಶಿಮಿಕ್ಕಮುಂಪ್ರಾಪ್ತಂ - ಗೋಪನಮಾಡುವದು ಕರ್ತವ್ಯವು.

**ಸಾಮಾನ್ಯನಾಕವುಮಾಂ. ಮಂತ್ರಶಬ್ದಂ ಮಂತ್ರಾರ್ಥಂ ಮುದಲಾನ ರಹಸ್ಯಂಗಳುಕ್ಕುಂ ಪ್ರದರ್ಶನಪರಂ. ಆನಿಂದ ರಹಸ್ಯಂಗಳೈಯನುಸಂಧಿಕ್ಕುಂ ಪೋದೆಲ್ಲಾಂ ಆಚಾರ್ಯಪರಂಪರೈಯೈಯನುಸಂಧಿಕ್ಕೈಯುಂ, ವಿಧಿಬಲಪ್ರಾಪ್ತಂ.**

ಮಂತ್ರೇ ತೀರ್ಥೇ ದ್ವಿಜೇದೇವೇ ದೈವಜ್ಞೇ ಭೇಷಜೇಗುರೌ।
ಯಶ್ಚ ಯಾವಾಂಶ್ಚ ವಿಶ್ವಾಸ ಸ್ಸಿದ್ಧಿ ರ್ಭವತಿ ತಾದೃಶೀ ॥

ಮಂತ್ರದಲ್ಲೂ, ಯಾತ್ರಾತೀರ್ಥದಲ್ಲೂ, ಬ್ರಾಹ್ಮಣನಲ್ಲೂ, ಈಶ್ವರನಲ್ಲೂ, ಪುರೋಹಿತನಲ್ಲೂ, ವೈದ್ಯನಲ್ಲೂ, ಗುರುವಿನಲ್ಲೂ, ಯಾವನಿಗೆ ಎಷ್ಟರಮಟ್ಟಿಗೆ ವಿಶ್ವಾಸವಿರುತ್ತದೋ ಅಷ್ಟರಮಟ್ಟಿಗೆ ಸಿದ್ಧಿಯುಂಟಾಗುತ್ತದೆ ಇತ್ಯಾದಿಪ್ರಮಾಣಗಳುಂಟು.)

(ಹೀಗೆ ಗುರುವಿನಲ್ಲೂ ಮಂತ್ರದಲ್ಲೂ ಭಕ್ತಿಯಿರಬೇಕೆಂದು ಹೇಳಿ ಮುಂದೆ ಗುರುಪರಂಪರೆಯಲ್ಲೂ ಭಕ್ತಿಯಿರಬೇಕೆಂಬುವದನ್ನು ಹೇಳುತ್ತಾರೆ.) ಇವ್ವಿಡತ್ತಿಲ್ - ಈ ಸಂದರ್ಭದಲ್ಲಿ ಅಂದರೆ "ಗುರುಂ ಪ್ರಕಾಶಯೇತ್" ಎಂಬ ಶ್ಲೋಕದಲ್ಲಿ, "ಗುರು" ಶಬ್ದವು ಪರಮಗುರುಗಳಾದ ಗುರುಪರಂಪರೆಯನ್ನೂ ಸೇರಿಸೇ ಹೇಳಿದುದೆಂಬದಾಗಿ ಭಾವಿಸತಕ್ಕದ್ದು. (ಈ ಗುರುಪರಂಪರೆಯಿಂದಲ್ಲವೆ ಈ ಮಂತ್ರವು ಪರಂಪರೆಯಾಗಿ ಉಪದೇಶಿಸಲ್ಪಟ್ಟದ್ದು ಅಲ್ಲದೆ ಅವರುಗಳಿಂದಲೇ ಅದರ ಮಾಹಾತ್ಮ್ಯೆಯು ಪ್ರಕಾಶವನ್ನು ಹೊಂದಿತು. ಆದುದರಿಂದ ಗುರುಶಬ್ದವು ವಾಸ್ತವಿಕವಾರ್ಥವಲ್ಲದೆ ಲಾಕ್ಷಣಿಕಾರ್ಥವನ್ನು ಕೂಡ ಉಳ್ಳದಾದ ಪ್ರಯುಕ್ತ "ಉಪಲಕ್ಷಣ"ವೆಂದು ಹೇಳಿರುತ್ತಾರೆ) ಹಾಗೆ ಲಾಕ್ಷಣಿಕವಾಗಿ ಭಾವಿಸದೆ ಗುರುಶಬ್ದಕ್ಕೆ ಸಾಮಾನ್ಯವಾಗಿಯೆ ಪರಮಗುರುಗಳಾದ ಗುರುಪರಂಪರೆ ಎಂಬದಾಗಿಯೂ ಭಾವಿಸಬಹುದು. (ಆದರೆ ಮಂತ್ರದ ಅರ್ಥವನ್ನಾದರೂ ಬಹಿರಂಗಪಡಿಸಬಹುದೇ ಎಂದರೆ ಅದೂ ಕೂಡದೆಂಬ ತಾತ್ಪರ್ಯದಿಂದ ಹೇಳುತ್ತಾರೆ.) "ಮಂತ್ರ" ಶಬ್ದವೂ ಕೂಡ ಇಲ್ಲಿ ಮಂತ್ರದ ಅರ್ಥವೇ ಮೊದಲಾದ ರಹಸ್ಯಾರ್ಥಗಳನ್ನು ಪ್ರದರ್ಶನಮಾಡುವದೂ ಸೇರಿ ಹೇಳಲ್ಪಟ್ಟು, ಅದೂಕೂಡ ನಿಷೇಧಿಸಲ್ಪಟ್ಟಿರುತ್ತದೆ.

**ಇವ್ವಾಚಾರ್ಯರ್ಕಳುಡೈಯವನುಸಂಧಾನಂ, "ಸಂಭಾಷ್ಯಪುಣ್ಯಕೃತೋ ಮನಸಾಧ್ಯಾಯೇತ್[1]" ಎನ್ಗಿರಪಡಿಯೆ ಪ್ರತಿಷಿದ್ಧಸಂಭಾಷಣತ್ತಿರ್ಕುಪ್ರಾಯಶ್ಚಿತ್ತಮುಮಾಂ.**

---

(ಆದರೆ ಶ್ರೀನಿಗಮಾಂತದೇಶಿಕರವರು ಇಂತಹ ಮಂತ್ರರಹಸ್ಯಾರ್ಥಗಳನ್ನು ವಿಶದೀಕರಿಸಿ ಗ್ರಂಥವನ್ನು ಬರೆಯಬಹುದೇ ಎಂದರೆ ಗುರುಭಕ್ತಿ ಇಲ್ಲದವನಿಗೆ ಇಂತಹ ಗ್ರಂಥಗಳಲ್ಲಿ ಅಭಿರುಚಿಯುಂಟಾಗಲಾರದ ಪ್ರಯುಕ್ತ ಬಾಧಕವಿಲ್ಲವೆಂಬ ಭಾವವು) ಈ ಮಂತ್ರರಹಸ್ಯಗಳನ್ನು ಅನುಸಂಧಾನಮಾಡುವ ಕಾಲದಲ್ಲೆಲ್ಲಾ ಈ ಗುರುಪರಂಪರೆಯನ್ನು ಅನುಸಂಧಾನಮಾಡಬೇಕೆಂಬುವದು ಶಾಸ್ತ್ರಬಲದಿಂದ ಮುಖ್ಯಕರ್ತವ್ಯವು. (ಅಂದರೆ ತಾನೇ ಮಂತ್ರಜಪಮಾಡುವಾಗಲೂ, ಮಂತ್ರೋಪದೇಶವನ್ನು ಶಿಷ್ಯನಿಗೆ ಮಾಡುವಾಗಲೂ, ತಾನೇ ಮಂತ್ರಾರ್ಥಕಾಲಕ್ಷೇಪಮಾಡುವಾಗಲೂ ಅಥವಾ ಶಿಷ್ಯನಿಗೆ ಮಂತ್ರಾರ್ಥಕಾಲಕ್ಷೇಪಹೇಳುವಾಗಲೂ ಆ ಕಾಲಕ್ಷೇಪಗಳ ಪ್ರಾರಂಭೋಪಸಂಹಾರಗಳಲ್ಲೂ ಗುರುಪರಂಪರಾ ಧ್ಯಾನಪೂರ್ವಕವಾಗಿ ಅವರುಗಳ ತನಿಯಗಳನ್ನು ಹೇಳತಕ್ಕದ್ದು ಕರ್ತವ್ಯವೆಂಬದಾಗಿ ಶಾಸ್ತ್ರವು ಹೇಳುತ್ತದೆ ಎಂಬ ಭಾವವು. ಶ್ರುತಿಯೂ ಎಲ್ಲಿ ವಿಧಿಸಿರುತ್ತದೆ ಎಂದರೆ ಕಠಶ್ರುತಿಯಲ್ಲಿ "ಆಚಾರ್ಯಂ ಮನಸಾ ಧ್ಯಾತ್ವಾ ಮಂತ್ರ ಮಧ್ಯಾಪಯೇದ್ಗುರುಃ" ಎಂಬದಾಗಿ ಹೇಳಿರುತ್ತದೆ. ಇಲ್ಲಿ "ಆಚಾರ್ಯಂ" ಎಂಬ ಶಬ್ದವು ತನ್ನ ಸ್ವಂತ ಆಚಾರ್ಯ ಮೊದಲುಗೊಂಡು ಪರಮಾಚಾರ್ಯನಾದ ಭಗವಂತನ ವರೆವಿಗೂ ಅನ್ವಯವನ್ನು ಸೂಚಿಸುತ್ತದೆಯಾದುದರಿಂದ ಜಾತ್ಯೇಕವಚನವಾಗಿ ಭಾವಿಸತಕ್ಕದ್ದು. ಆದುದರಿಂದ ಈ ಶ್ರುತಿಯ ಅರ್ಥವೇನೆಂದರೆ—ಆಚಾರ್ಯಪರಂಪರೆಯನ್ನು ಮನಸ್ಸಿನಲ್ಲಿ ಧ್ಯಾನಿಸಿದವನಾಗಿ ಗುರುವು ಶಿಷ್ಯನಿಗೆ ಮಂತ್ರವನ್ನುಪದೇಶಿಸತಕ್ಕದ್ದು. ಮತ್ತೂ

---

1 ಗೌತಮಧರ್ಮಶಾಸ್ತ್ರವಚನಂ "ನಮ್ಲೇಚ್ಛಾಶುಚ್ಯಧಾರ್ಮಿಕೈಸ್ಸಹಸಂಭಾಷೇತ" ಎಂಬುದು ಪೂರ್ವವಾಕ್ಯ.

**ಎನ್ನುಯಿರ್ ತನ್ದಳಿತ್ತವರೈ ಚ್ಚರಣಂಪುಕ್ಕು**
**ಯೊನಡೈವೇ ಚುವರ್ ಗುರುಕ್ಕಣಿರೈ ವಣಂಗಿ**
**ಪ್ಪಿನ್ನರುಳಾರ್ ಪೆರಂಬೂದೂರ್ ವಂದ ವಳ್ಳಲ್**
**ಪೆರಿಯನಂಬಿಯಾಳವಂದಾರ್ ಮಣಕ್ಕಾಲ್‌ನಂಬಿ**

---

ಯದಾಹ್ಯಯಂ ಸ್ವಶಿಷ್ಯೇಭ್ಯೋರಹಸ್ಯಂ ವಕ್ತು ಮಿಚ್ಛತಿ ।
ತದಾತದಾನುಸಂದಧ್ಯಾತ್ಸ್ವಪೂರ್ವ್ಯಗುರು ಪರಂಪರಾಂ ॥

"ಯಾವಾಗ ಈತನು ತನ್ನ ಶಿಷ್ಯರಿಗೆ ಮಂತ್ರರಹಸ್ಯಾರ್ಥಗಳನ್ನು ಹೇಳಲಪೇಕ್ಷಿಸುತ್ತಾನೋ ಆಯಾ ಕಾಲದಲ್ಲೆಲ್ಲಾ ಚೆನ್ನಾಗಿ ಗುರುಪರಂಪರೆಯನ್ನನುಸಂಧಾನಮಾಡತಕ್ಕದ್ದು" ಇತ್ಯಾದಿ ಪ್ರಮಾಣಗಳಿರುತ್ತವೆ.

(ಇಂತಹ ಗುರುಪರಂಪರಾಧ್ಯಾನದ ಮತ್ತೊಂದು ಪ್ರಯೋಜನವನ್ನು ಸೂಚಿಸುತ್ತಾರೆ.) ಈ ಆಚಾರ್ಯಪರಂಪರೆಯ ಅನುಸಂಧಾನವು, "ನಮ್ಲೇಚ್ಛಾಶುಚ್ಯಧಾರ್ಮಿಕೈಸ್ಸಹ ಸಂಭಾಷೇತ" ಮ್ಲೇಚ್ಛರು, ಅಶುಚಿಯಾದವರು, ಅಧಾರ್ಮಿಕರು ಇವರುಗಳೊಡನೆ ಸಂಭಾಷಣೆ ಮಾಡತಕ್ಕದ್ದಲ್ಲವು ಎಂಬ ನಿಷೇಧವಾಕ್ಯಕ್ಕೆ ವಿರೋಧನಾಗಿ, ಸಂಭಾಷ್ಯ - ಸಂಭಾಷಣೆಮಾಡಿದ್ದೇಯಾದರೆ, ಪುಣ್ಯಶಾಲಿಗಳಾದ ಆಚಾರ್ಯಪರಂಪರೆಯನ್ನು ಮನಸ್ಸಿನಿಂದ ಧ್ಯಾನಿಸತಕ್ಕದ್ದೆಂಬ ವಚನವು ದೋಷಾವಹವಾದ ಸಂಭಾಷಣೆಗೆ ಪ್ರಾಯಶ್ಚಿತ್ತರೂಪವಾಗಿ ಪರಿಣಮಿಸುವದು.

ಮೊದಲು ಗುರುಪರಂಪರೆಯನ್ನು ಸ್ತೋತ್ರಮಾಡಿ, ಗುರುಪರಂಪರೆಯ ಅನುಸಂಧಾನವನ್ನು ತಾವೇ ಉಪದೇಶಿಸಿದುದನ್ನು ತಾವೇ ಆಚರಿಸುವದು ಕರ್ತವ್ಯವೆಂದು ಭಾವಿಸಿ, ತಾವೂ ಈ ರಹಸ್ಯಾರ್ಥಗಳ ಉಪದೇಶರೂಪವಾಗಿ ಗ್ರಂಥನಿರ್ಮಾಣಮಾಡಬೇಕೆಂದು ಆರಂಭಿಸಿರುವದರಿಂದ ಗುರುಪರಂಪರಾಪ್ರಣಾಮವು ಅವಶ್ಯವೆಂದೂ ಭಾವಿಸಿ ತಮ್ಮ ಗುರುಗಳು ಮೊದಲುಗೊಂಡು ಪರಮಾಚಾರ್ಯನಾದ ಸರ್ವೇಶ್ವರನವರಿವಿಗೂ ಗುರುಪರಂಪರೆಯ ಪಾದಗಳಿಗೆರಗುತ್ತಾರೆ.

**ಅರ್ಥ**—ಯಾ‌ನ್ - ದಾಸನಾದ ನಾನು, ಎನ್ನುಯಿರ್ - ಸ್ವಾಮಿಗೆ

**ನನ್ನೆರಿಯೈ ಯುವರ್ಕ್ಕುರೈತ್ತ ಉಯ್ಯಕೊಂಡಾರ್**
**ನಾಥಮುನಿ ಶಠಗೋಪರ್ ಶೇನೈನಾರ್**
**ಇನ್ನಮುತ್ತ ತಿರುಮಕಳಿಂ ಎನ್ರಿವರೈಮುನ್ನಿ**
**ಟ್ಟೆಂಬುರುವರ್ ತಿರುವಡಿಗಳಡೈಕಿನ್ರೇನೆ ॥೩॥**

---

ನಾನು ಶೇಷಭೂತನೆಂಬ ಜ್ಞಾನವಿಲ್ಲದೆ ಆತ್ಮನಾಶಮಾಡಿಕೊಂಡ ನನಗೆ ಅಂತಹ ಜ್ಞಾನವನ್ನುಂಟುಮಾಡಿ ಜೀವಾತ್ಮಪರಮಾತ್ಮ ಸ್ವರೂಪ ವನ್ನು ತಿಳಿಸಿ ಸತ್ತೆಯನ್ನು, ತಂದು - ಉಪದೇಶಿಸಿ, ಅಳಿತ್ತವರೈ - ರಕ್ಷಿಸಿದ ನಮ್ಮ ಆಚಾರ್ಯರುಗಳನ್ನು, ಶರಣಂಪುಕ್ಕು - ಶರಣವಾಗಿ ಆಶ್ರಯಿಸಿ, ಅಡೈವೆ - ಕ್ರಮವಾಗಿ, ಅವರ್‌ಗುರುಕ್ಕಳ್ - ಅವರ ಗುರು ಗಳು ಹೀಗೆ, ಸಿರೈ - ಪಙ್ತಿಯನ್ನು, ವಣಂಗಿ - ನಮಸ್ಕರಿಸಿ, ಪಿನ್ - ಅನಂತರದಲ್ಲಿ, ಅರುಳಾಲ್ - ಕೃಪೆಯಿಂದ, ಪೆರಂಬೂದೂರ್‌ವಂದ ವಳ್ಳಲ - ಶ್ರೀಪೆರಂಬೂದೂರ್ ಎಂಬ ದಿವ್ಯಸ್ಥಳದಲ್ಲಿ ಅವತರಿಸಿದ ಪರ ಮೋದಾರರಾದ ಶ್ರೀಭಗವಾನ್ ಭಾಷ್ಯಕಾರರು (ಇವರು ತಮ್ಮ ಗುರು ವಾದ ತಿರಕ್ಕೋಟ್ಟಿಯೂರ್ ನಂಬಿಯಿಂದ ಅನುಗ್ರಹಿಸಲ್ಪಟ್ಟ ದ್ವಯ ಮಂತ್ರಾರ್ಥವನ್ನು ಏಕಕಾಲದಲ್ಲೇ ತಮ್ಮ ಎಲ್ಲಾ ಸಚ್ಛಿಷ್ಯರಿಗೂ ಉ ಪದೇಶಿಸಿದ ಉದಾರಭಾವದಿಂದ, "ವಳ್ಳಲ್" ಎಂಬದಾಗಿ ಪ್ರಯೋಗಿಸಿರು ತ್ತಾರೆ.) ಪೆರಿಯನಂಬಿ - ಅವರ ಗುರುವಾದ ಮಹಾಪೂರ್ಣರು, ಆಳ ವಂದಾರ್ - ಅವರ ಗುರುವಾದ ಯಾಮುನಾಚಾರ್ಯರು, ಮಣಕ್ಕಾ ಲ್‌ನಂಬಿ - ಅವರ ಆಚಾರ್ಯರಾದ ಶ್ರೀರಾಮಮಿಶ್ರರು, ನನ್ನೆರಿಯೆ - ನಲ್-ಸಮೀಚೀನವಾದ, ನೆರಿಯೈ - ಮಾರ್ಗ ಅಂದರೆ ಪ್ರಪತ್ತಿಮಾರ್ಗ ಮಹಾತ್ಮ್ಯೆಯನ್ನು, ಅವರ್ಕ್ಕು - ಆ ಮಣಕ್ಕಾಲ್‌ನಂಬಿಗೆ, ಉರೈತ್ತ - ಉಪದೇಶಿಸಿದ, ಉಯ್ಯಕೊಂಡಾರ್ - ಪುಂಡರೀಕಾಕ್ಷರು, ನಾಥಮುನಿ- ಉಯ್ಯಕೊಂಡಾರ್‌ರ ಆಚಾರ್ಯರಾದ ನಾಥಮುನಿಗಳು, ಶಠಗೋ ಪರ್ - ಅವರ ಆಚಾರ್ಯರಾದ ನಮ್ಮಾಳ್ವಾರವರು, ಶೇನೈನಾರ್ - ಅವರಿಗೆ ಗುರುವಾದ ಶ್ರೀವಿಷ್ವಕ್ಸೇನರು, ಇನ್ ಅಮುತ್ತ - ಪರಮ ಭೋಗ್ಯವಾದ ಅಮೃತದೊಂದಿಗೆ, ತಿರುಮಗಳ್ - ಹುಟ್ಟಿದ ಶ್ರೀಮಹಾ

**ಪ್ರಪದನಮಯೆ ವಿದ್ಯಾಭೇದೆ ಪ್ರತಿಷ್ಠಿತಚೇತಸಃ ।**
**ಪ್ರತಿಪದಮಿಹಪ್ರಜ್ಞಾದಾಯಂದಿಶಂತು ದಯಾಧನಾಃ ।**

ಲಕ್ಷ್ಮಿಯು ಅಥವಾ ಭೋಗ್ಯವಾದ ಅಮೃತದೋಹಾದಿಯಲ್ಲಿ ಸ್ವಾಮಿಗೆ ಪರಮಭೋಗ್ಯಳಾದ ಶ್ರೀಮಹಾಲಕ್ಷ್ಮಿಯು, ಏಸ್ರಿವರ್ಯ - ಎಂದು ಮೇಲೆಹೇಳಿದ ಈ ಆಚಾರ್ಯರುಗಳನ್ನು, ಮುನ್ನಿಟ್ಟು, ಮೊದಲು ಆಶ್ರಯಿಸಿ, ಎಂಬೆರುಮಾನ್ - ನಮಗೆ ಶೇಷಿಯಾದ ಶ್ರೀಮನ್ನಾರಾಯಣನ, ತಿರುವಡಿಗಳ್ - ಶ್ರೀಪಾದಗಳನ್ನು, ಅಡೈಕಿನ್ರೇನೆ - ಆಶ್ರಯಿಸುತ್ತೇನೆ.

(ಈ ಮೇಲಿನ ಪಾಶುರದಿಂದ ಶ್ರೀಮಾನ್ ನಿಗಮಾಂತಮಹಾದೇಶಿಕರವರು ತಮ್ಮ ಸ್ವಂತ ಆಚಾರ್ಯಪ್ರಾಚಾರ್ಯರು ಮೊದಲುಗೊಂಡು ಕ್ರಮವಾಗಿ ಮಹನೀಯರಾದ ಗುರುಪರಂಪರೆಯಲ್ಲಿ ಮುಖ್ಯರಾದವರನ್ನು ಸೇರಿಸಿ ಅನುಸಂಧಾನಮಾಡುತ್ತಾರೆ. ಇಂತಹ ಅನುಸಂಧಾನವು ತಾವು ಈಗ ಉದ್ದೇಶಿಸಿರುವ ರಹಸ್ಯತ್ರಯಗಳ ಅರ್ಥಪ್ರಕಾಶರೂಪವಾದ ಕೈಂಕರ್ಯಕ್ಕೆ ಬೇಕಾದ ಜ್ಞಾನಸಂಪಾದಕವೆಂದು ಭಾವಿಸಿ ಈ ಪಾಶುರವನ್ನು ಅನುಗ್ರಹಿಸಿರುತ್ತಾರೆ.

ಹಿಂದಿನ ಪಾಶುರದಲ್ಲಿ ಗುರುಪರಂಪರಾನುಸಂಧಾನವು ತತ್ವಹಿತ ಪುರುಷಾರ್ಥ ಜ್ಞಾನಜನಕವೆಂದು ಹೇಳಿ ಈಗ ಪ್ರಕೃತದಲ್ಲಿ ತಾವು ಬರಿಯುವ ಗ್ರಂಥವು ಪ್ರಪದನಮಾರ್ಗಪ್ರತಿಪಾದಕವಾದುದರಿಂದ ತದ್ವಿಷಯವಾದ ಜ್ಞಾನಪ್ರಾಪ್ತಿಗೆ, ಅಂತಹ ಪ್ರಪತ್ತಿಮಾರ್ಗವನ್ನು ಪ್ರಕಟನ ಮಾಡಿದ ನಮ್ಮಾಳ್ವಾರ್, ಶುಕ, ವ್ಯಾಸ, ವಾಲ್ಮೀಕಿ ಮೊದಲಾದ ಮಹರ್ಷಿಗಳ ಅನುಸಂಧಾನವು ಅವಶ್ಯಕವೆಂದು ಭಾವಿಸಿ, ಅಂತಹ ಮಹನೀಯರ ಗ್ರಂಥಾವಲೋಕನದಿಂದ ಪರಿಪಕ್ವವಾದ ಜ್ಞಾನವುಳ್ಳವರು ತಮ್ಮ ಆಚಾರ್ಯರು ಎಂಬುದಾಗಿ ಅಪ್ಪಣೆಕೊಡಿಸುತ್ತಾರೆ.)

**ಅರ್ಥ**—ಪ್ರಪದನಮಯೆ - ಶರಣಾಗತಿರೂಪವಾದ, ವಿದ್ಯಾಭೇದೆ - ೩೨ ವಿಧವಾದ ಉಪಾಸನಮಾರ್ಗ ಮತ್ತು ಪ್ರಪತ್ತಿಶಾಸ್ತ್ರ ಇವುಗಳಲ್ಲಿ, ಪ್ರತಿಷ್ಠಿತಚೇತಸಃ - ಸ್ಥಿರವಾಗಿ ನೆಲಿಸಿದ ಮನಸ್ಸುಳ್ಳ,

**ಶಠರಿಪು ಶುಕ ವ್ಯಾಸ ಪ್ರಾಚೇತಸಾದಿ ನಿಬಂಧನ**
**ಶ್ರಮಪರಿಣತ ಶ್ರದ್ಧಾಶುದ್ಧಾಶಯಾ ಮಮದೇಶಿಕಾಃ ॥**

---

ದಯಾಧನಾಃ ಐಹಿಕದಲ್ಲೇ ಮಗ್ನರಾಗಿರುವವರನ್ನು ಹೇಗಾದರೂ ಮಾಡಿ ಉಜ್ಜೀವಿಸುವ ಹಾಗೆ ಮಾಡಬೇಕೆಂಬ ದಯೆಯೇ ಧನವಾಗಿಉಳ್ಳ, "ಶಠರಿಪು ಶುಕವ್ಯಾಸ ಪ್ರಾಚೇತಸಾದಿ ನಿಬಂಧನಶ್ರಮಪರಿಣತಶ್ರದ್ಧಾಶುದ್ಧಾಶಯಾಃ" ಶಠರಿಪು - ನಮ್ಮಾಳ್ವಾರ್, ಶುಕ - ಶುಕಮಹರ್ಷಿ, ವ್ಯಾಸ - ವ್ಯಾಸಮಹರ್ಷಿ, ಪ್ರಾಚೇತಸ - ವಾಲ್ಮೀಕಿಮಹರ್ಷಿ, ಆದಿ - ಇವರೇ ಮೊದಲಾದವರ (ಆದಿ ಎಂಬುವದರಿಂದ ಪರಾಶರ ಶೌನಕರೇ ಮೊದಲಾದವರುಗಳು ಹೇಳಲ್ಪಟ್ಟರು), ನಿಬಂಧನ-ಗ್ರಂಥಗಳಾದ ತಿರುವಾಯ್‌ಮೊಳಿ ಭಾಗವತ, ಭಾರತ, ರಾಮಾಯಣ, ವಿಷ್ಣುಪುರಾಣ, ವಿಷ್ಣುಧರ್ಮವೆಂಬ ಕಾವ್ಯಗಳ, ಶ್ರಮ - ಓದಿಸ್ವಾರಸ್ಯಗ್ರಹಣಮಾಡುವ ಶ್ರಮದಿಂದ, ಪರಿಣತ-ಪರಿಪಕ್ವವಾದ, ಶ್ರದ್ಧಾ-ಭಕ್ತಿ ಅಥವಾ ಉತ್ಸಾಹದಿಂದ, ಶುದ್ಧಾಶಯಾಃ - ಅಂತಹ ಗ್ರಂಥಗಳುಪದೇಶದಿಂದ ಮೂರುವಿಧವಾದ ಅಜ್ಞಾನವು ತೊಲಗಿ, " ಶುದ್ಧಭಾವಂ ಗತೋಭಕ್ತ್ಯಾ " ಎಂದು ಹೇಳಿರುವಹಾಗೆ ಶುದ್ಧಭಾವವನ್ನು ಹೊಂದಿದ, ಮಮ - ನನ್ನ, ದೇಶಿಕಾಃ - ಆಚಾರ್ಯರುಗಳು, ಪ್ರತಿಪದಂ - ಪ್ರತಿಕ್ಷಣದಲ್ಲೂ, ಇಹ-ಇಲ್ಲಿ, ಪ್ರಜ್ಞಾದಾಯಂ - ಜ್ಞಾನವೆಂಬ ದಾಯಭಾಗವನ್ನು, (ಅವರುಗಳಿಗಿರುವ ಜ್ಞಾನದ ಸ್ವಲ್ಪ ಭಾಗವನ್ನಾಗಲಿ,) ದಿಶಂತು - ತೋರಿಸಲಿ, ಅಂದರೆ ಅವರ ಕೃಪೆಯಿಂದುಂಟಾಗಲಿ ಎಂಬರ್ಥವು.

**ತಾತ್ಪರ್ಯ**—ಮೇಲೆ ಹೇಳಿದ ಪಾಶುರಗಳಲ್ಲೆಲ್ಲಾ ಆಳ್ವಾರಾಚಾರ್ಯರುಗಳನುಸಂಧಾನವು ಮಾಡಲ್ಪಟ್ಟಿತು. ಅವರುಗಳು ಸಾರತಮವಾದ ಶರಣಾಗತಿಶಾಸ್ತ್ರವನ್ನು ನಮಗೆ ಪರಮಕೃಪೆಯಾಬೋಧಿಸಿರುತ್ತಾರೆ. ಅಂತಹ ಸಾರತಮಶಾಸ್ತ್ರದ ಉಪಪಾದನೆಯನ್ನು ತಾವೂ ಈಗ ಆರಂಭಿಸಿರುತ್ತಾರೆ. ಅಂತಹ ಶಾಸ್ತ್ರವನ್ನೇ ಉಪಪಾದಿಸಿದ ಮಹನೀಯರನ್ನು ಕೊಂಡಾಡಿಯೇ ಗ್ರಂಥಾರಂಭವನ್ನು ಮಾಡಬೇಕೆಂದೆಣಿಸಿ ಅಂತಹ ಮಹನೀಯರು ಯಾರೆಂಬುವದನ್ನು ತಿಳಿಸಿ, ಅಂಥಾವರ ಗ್ರಂಥ

ಸ್ವಾರಸ್ಯದಿಂದಲೇ ಪರಿಪಕ್ವವಾದ ಜ್ಞಾನವುಳ್ಳವರು ತಮ್ಮ ಆಚಾರ್ಯರು ಎಂದು ಹೇಳುತ್ತಾರೆ. ಹಾಗೆ ಪ್ರಪದನಶಾಸ್ತ್ರಮಾಹಾತ್ಮ್ಯ ಯನ್ನು ನಮ್ಮಾಳ್ವಾರ್ರವರು ರಚಿಸಿದ ತಿರುವಾಯ್ಮೊಳಿಯಲ್ಲೂ,ಶುಕ ಮಹರ್ಷಿಯು ಭಾಗವತದಲ್ಲೂ, ವ್ಯಾಸಭಗವಾನ್ರವರು ಐದನೇವೇದ ವೆಂದೆನಿಸಿದ ಶ್ರೀಮಹಾಭಾರತದಲ್ಲೂ ವಾಲ್ಮೀಕಿಮಹರ್ಷಿಯು ಶ್ರೀಮದ್ರಾಮಾಯಣದಲ್ಲೂ ವ್ಯಕ್ತಪಡಿಸಿರುತ್ತಾರೆ. ಈ ಗ್ರಂಥ ಗಳಲ್ಲಿರುವ ಈ ಸ್ವಾರಸ್ಯಗ್ರಹಣಕ್ರಮದಿಂದ ಪರಿಪಕ್ವವಾದ ಜ್ಞಾನ ವು ತಮ್ಮ ಗುರುಗಳಿಗೆ ಉಂಟಾಯಿತೆಂಬಭಾವವು. ಈ ಮೇಲಿನ ಗ್ರಂಥಗಳಲ್ಲಿ ಶರಣಾಗತಿಧರ್ಮದ ಉಪಪಾದನವು ಅನೇಕ ಕಡೆಗಳಲ್ಲಿ ದ್ದರೂ ನಿದರ್ಶನಕ್ಕಾಗಿ ಅವುಗಳ ಒಂದೊಂದು ಉದಾಹರಣೆಯಿಂದ ತೋರಿಸಬಹುದು.

ನಮ್ಮಾಳ್ವಾರ್ ತಿರುವಾಯ್ಮೊಳಿಯಿಂದ –

ಅಕಲಕಿಲ್ಲೇನಿರೈಯು ಮೆನ್ರಲರ್ಮೇಲ್ ಮಂಗೈಯುರೈಮಾರ್ಪಾ।
ನಿಕರಿಲ್ಪುಕಳಾ ಯುಲಕಮೂನ್ರುಡೈಯಾ ಯೆನ್ನೈಯಾಳ್ವಾನೇ ॥
ನಿಕರಿಲಮರರ್ ಮುನಿಕ್ಕಣಂಗಳ್ ವಿರುಂಬುನ್ದಿರುವೇಂಗಡತ್ತಾನೆ।
ಪುಕಲೊನ್ರಿಲ್ಲಾ ವಡಿಯೇನುನ್ನಡಿಕ್ಕೀಳಮರ್ನ್ದು ಪುಕನ್ದೇನೆ ॥

ಅಂದರೆ " ಒಂದು ಕ್ಷಣವೂ ಕೂಡ ಪತಿಯನ್ನು ಬಿಟ್ಟು ಅಗಲಿರ ಲಾರನೆಂದು ಇರುವ ಮತ್ತು ಕಮಲವಾಸಿನಿಯಾದುದರಿಂದ ಮಾರ್ದವ ಭೋಗ್ಯತೆಗಳನ್ನು ಹೊಂದಿ ಆ ಕಾರಣದಿಂದ ವಾಲ್ಲಭ್ಯಾತಿಶಯವನ್ನು ಹೊಂದಿ, ಆಶ್ರಿತದೋಷಾನಭಿಜ್ಞೆಯಾದುದರಿಂದ ಪುರುಷಕಾರತ್ವವನ್ನು ವಹಿಸಲು ಯೋಗ್ಯಳಾದ ಶ್ರೀಮಹಾಲಕ್ಷ್ಮಿಯನ್ನು ವಕ್ಷಸ್ಥಲದಲ್ಲಿ ಧರಿ ಸಿರುವವನೇ, ನಿರತಿಶಯವಾದ ವಾತ್ಸಲ್ಯಸೌಶೀಲ್ಯಾದಿ ಕಲ್ಯಾಣಗುಣ ಗಳುಳ್ಳವನಾದುದರಿಂದ ಮಹಾಯಶಸ್ಸನ್ನು ಪಡೆದವನೇ, ಮೂರು ಲೋಕವೂ ತನ್ನ ಸ್ವತ್ತಾಗಿ ರಕ್ಷ್ಯವಾದುದೆಂದು ಭಾವಿಸಿರುವವನೇ, ನನ್ನನ್ನುದ್ಧಾರಮಾಡುವವನೇ, ನಿರತಿಶಯರಾದ ನಿತ್ಯಸೂರಿಗಳೂ ಋಷಿ ಗಳ ಸಮೂಹವೂ ಕೂಡ ಆಶೆಪಟ್ಟು ಆಶ್ರಯಿಸುವಹಾಗೆ ತಿರುಮಲೆ ಯಲ್ಲಿ ಬಿಜಮಾಡಿರುವ ಶ್ರೀನಿವಾಸನೇ, ಬೇರೆಂದುಪಾಯವನ್ನು ತಿಳಿ

ಯದ ದಾಸನಾದ ನಾನು ನಿನ್ನ ಪಾದಕಮಲದ ಕೆಳಗೆ ಸೇರಿ ಅನನ್ಯ ಪ್ರಯೋಜನನಾಗಿ ನಿನ್ನನ್ನು ಆಶ್ರಯಿಸಿದೆನು."

ಭಾಗವತದಲ್ಲಿ—

ದೇವರ್ಷಿಭೂತಾತ್ಮ ನೃಣಾಂ ಪಿತೄಣಾಂ ನಕಿಂಕರೋ ನಾಯ
ಮೃಣೀಚ ರಾಜನ್ ।
ಸರ್ವಾತ್ಮನಾಯಶ್ಶರಣಂ ಶರಣ್ಯಂ ನಾರಾಯಣಂ ಲೋಕಗುರುಂ
ಪ್ರಪನ್ನಃ ॥

"ಯಾವನು ಪ್ರಪನ್ನನೆನಿಸಿ, ಆಶ್ರಯಿಸಲು ಯೋಗ್ಯನೆನಿಸಿ, ತನ್ನಲ್ಲಿರುವ ಕೃಪೋದಾರ್ಯಸೌಲಭ್ಯಸೌಶೀಲ್ಯವಾತ್ಸಲ್ಯಾತಿಶಯಗಳಿಂದ ಸರ್ವಲೋಕಕ್ಕೂ ಆಚಾರ್ಯನಾದ ಶ್ರೀಮನ್ನಾರಾಯಣನನ್ನು ಶರಣುಹೊಂದುವನೋ ಅವನು ದೇವತೆಗಳೂ ಋಷಿಗಳೂ ಭೂತಗಳೂ ಆತ್ಮರುಗಳೂ ಮನುಷ್ಯರೂ ಪಿತೃಗಳೂ ಇವರುಗಳಿಗೆಲ್ಲಾ ಶೇಷನಲ್ಲವು ಮತ್ತು ಅವರುಗಳ ಋಣವ್ಯಾವದೂ ಈತನಿಗೆ ಇರುವದಿಲ್ಲವು.

ಭಾರತದಲ್ಲಿ—

ಸರ್ವೇಷಾಮೇವ ಲೋಕಾನಾಂ ಪಿತಾಮಾತಾಚ ಮಾಧವಃ ।
ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ ॥

ಓ ಪುರುಷಶ್ರೇಷ್ಠರುಗಳಿರಾ, ಸರ್ವಲೋಕಗಳಿಗೂ ತಂದೆಯೂ ತಾಯಿಯೂ ಸಹ ಆ ಲಕ್ಷ್ಮೀಪತಿಯು, ಆದುದರಿಂದ ಶರಣು ಹೊಂದಿರಿ.

ರಾಮಾಯಣದಲ್ಲಿ—

ಸಕೃದೇವಪ್ರಪನ್ನಾಯ ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋದದಾಮ್ಯೇತದ್ವ್ರತಂಮಮ ॥

ಒಂದೇಸಲವಾದರೂ ನಿನ್ನವನಯ್ಯಾ ನಾನು, ಕಾಪಾಡು ಎಂದು ಬೇಡಿದ ಪ್ರಪನ್ನನಿಗೆ ಸರ್ವಭೂತಗಳಿಂದ ಭಯವಿಲ್ಲದಹಾಗೆ ಮಾಡಿ ಆತನನ್ನು ರಕ್ಷಿಸುವೆನು, ಇದೀಗ ನನ್ನ ಸತ್ಯಪ್ರತಿಜ್ಞೆಯು.

ಹೀಗೆ ಪ್ರಪತ್ತಿಧರ್ಮವು ಬಹುಸ್ವಾರಸ್ಯವಾಗಿ ಈ ಗ್ರಂಥಗಳಲ್ಲಿ ಉಪಪಾದಿತವಾಗಿದೆ. ಇಲ್ಲಿ ಪ್ರಾಚೇತಸಾದಿ ಎಂದು ಆದಿಶಬ್ದಪ್ರಯೋ

**ಏತೇ ಮಹ್ಯಮಪೋಢಮನ್ಮಥಶರೋನ್ಮಾಥಾಯ ನಾಥಾದಯಃ।**
**ಸ್ತ್ರಯ್ಯಂತಪ್ರಥಿನಂದನೀಯ ವಿವಿಧೋದಂತಾ ಸ್ವದಂತಾಮಿಹ ॥**

---

ಗವು ಶೌನಕಾದಿಗಳನ್ನು ಸೂಚಿಸುತ್ತದೆಂದು ಮೇಲೆಹೇಳಲ್ಪಟ್ಟಿತು. ಶೌನಕವಾಕ್ಯವು ಯಾವುದೆಂದರೆ—

ವೃಥೈವಭವತೋ ಯಾತಾ ಭೂಯಸೀಜನ್ಮ ಸಂತತಿಃ ।
ತಸ್ಯಾಮನ್ಯತಮಂ ಜನ್ಮ ಸಂಚಿತ್ಯ ಶರಣಂವ್ರಜ ॥

ಅನೇಕವಾದ ಜನ್ಮಗಳ ಸಮೂಹವು ವ್ಯರ್ಥವಾದುದೇ ಆಯಿತು. ಅವುಗಳಲ್ಲೊಂದಾದ ಈ ಒಂದು ಜನ್ಮವನ್ನು ಆಲೋಚಿಸಿ ಸ್ವಾಮಿಯನ್ನು ಶರಣುಹೊಂದು.

ಈ ಆಚಾರ್ಯವರ್ಯರಿಗೆ ಗುರುಪರಂಪರಾಧ್ಯಾನದಲ್ಲಿ ಅವರಿಗಿರುವ ಭಕ್ತಿಯು ಆದರಾತಿಶಯದಿಂದ "ಏತೆ" ಎಂಬ ಮುಂದಿನ ಶ್ಲೋಕದಿಂದ ಪುನಃ ಸ್ತೋತ್ರಮಾಡುತ್ತಾರೆ.

**ಅರ್ಥ**—ಏತೇ - ಹಿಂದೆ ಹೇಳಿದ ಮಹನೀಯರಾದ ಮತ್ತು ಪ್ರಸಿದ್ಧರಾದ, ನಾಥಾದಯಃ - ನಾಥಮುನಿಗಳೇ ಮೊದಲಾದ ದೇಶಿಕಾಃ- ಆಚಾರ್ಯರುಗಳು, ಅಪೋಢಮನ್ಮಥಶರೋನ್ಮಾಥಾಯ - (ಅಂತಹ ಆಚಾರ್ಯಕೃಪೆಯಿಂದ) ನಿರಸನಮಾಡಲ್ಪಟ್ಟ ಮನ್ಮಥನ ಬಾಣಪ್ರಾಬಲ್ಯವುಳ್ಳ ಅಂದರೆ ಇಂದ್ರಿಯಗಳನ್ನೆಲ್ಲಾ ಜಯಿಸಿದ, ಮಹ್ಯಂ - ನನಗೆ, ಇಹ - ಈ ಸಂಸಾರಾವಸ್ಥೆಯಲ್ಲೇ, ಸ್ವದಂತಾಂ - ಭೋಗ್ಯತಮರಾದವರಾಗಲಿ, ಅಂದರೆ ಇಂತಹ ಪ್ರಸಿದ್ಧರಾದ ಉದಾರಿಗಳಾದ ನಾಥಮುನಿ ಮೊದಲಾದ ಆಚಾರ್ಯರುಗಳು, ಅವರುಗಳ ಕೃಪೆಯಿರುವಿಕೆಯಿಂದಲೇ ಇಂದ್ರಿಯಗಳ ಹಾವಳಿಯು ತಪ್ಪಿ, ವೈರಾಗ್ಯವುಂಟಾಗಿರುವ ನನಗೆ ಪ್ರಿಯತಮರಾಗಿರಲಿ, ಎಂಬರ್ಥವು. ಇಲ್ಲಿ ಎಲ್ಲಾ ಅರಿಷಡ್ವರ್ಗಗಳನ್ನೂ ಹೇಳದೆ ಕಾಮಮಾತ್ರ ಹೇಳಿರುವದರ ಅಭಿಪ್ರಾಯವೇನೆಂದರೆ "ಕಾಮಾತ್ಕ್ರೋಧೋಽಭಿಜಾಯತೇ । ಕ್ರೋಧಾದ್ಭವತಿಸಂಮೋಹಃ ॥" ಎಂಬದಾಗಿ ಗೀತೆಯಲ್ಲಿ ಹೇಳಿರುವಹಾಗೆ ಕಾಮದೊಂದಿಗೆ ಅನುಸರಿಸಿ ಮಿಕ್ಕೆಲ್ಲವೂ ಉಂಟಾಗುವದರಿಂದ "ಮನ್ಮಥ" ಶಬ್ದದಿಂದ ಕಾಮ

**ಶ್ರದ್ಧಾತವ್ಯ ಶರಣ್ಯದಂಪತಿ ದಯಾದಿವ್ಯಾಪಗಾ ವ್ಯಾಪಕಾಃ ।**
**ಸ್ಪರ್ಧಾವಿಪ್ಲವ ವಿಪ್ರಲಂಭ ಪದವೀ ವೈದೇಶಿಕಾ ದೇಶಿಕಾಃ ॥೨॥**

ಬಂದೇ ಹೇಳಲ್ಪಟ್ಟಿತೆಂದ ತಿಳಿಯತಕ್ಕದ್ದು. ಆ ಆಚಾರ್ಯರುಗಳು ಎಂಥಾವರೆಂದರೆ ಹೇಳುತ್ತಾರೆ.

ತ್ರಯ್ಯಂತಪ್ರತಿನಂದನೀಯ ವಿವಿಧೋದಂತಾಃ, ತ್ರಯ್ಯಂತ-ವೇದಾಂತಗಳಿಂದ, ಪ್ರತಿನಂದನೀಯ-ಶ್ಲಾಘಿಸಲು ಯೋಗ್ಯಗಳಾದ, ವಿವಧ-ನಾನಾಬಗೆಯಾದ, ಉದಂತಾಃ-ವೃತ್ತಾಂತಗಳುಳ್ಳವರು, ಅಂದರೆ ವೇದಾಂತವಾದ ತೈತ್ತರೀಯ ಮೊದಲಾದವುಗಳಲ್ಲಿ ಏನು ಹೇಳಲ್ಪಟ್ಟದೆಯೋ, ಅದರಂತೆಯೇ ಶ್ಲಾಘ್ಯವಾದ ಅನುಷ್ಠಾನವುಳ್ಳವರು, ಆ ವೇದಾಂತಗಳು ಹೇಳುವಾಗ, ಇವರುಗಳ ಶ್ಲಾಘ್ಯವಾದ ನಡತೆಗಳನ್ನು ಮುಂದಿಟ್ಟೇ ಏನಾದರೂ ಹೇಳಿತೋ ಎಂಬಭಿಪ್ರಾಯವು. ಅಥವಾ ವೇದಾಂತಗಳಿಗೆ ಇತರ ಸಿದ್ಧಾಂತಿಗಳು ಅಪಾರ್ಥಕಲ್ಪಿಸಿದರು. ನಮ್ಮ ಪೂರ್ವಾಚಾರ್ಯರುಗಳಾದರೋ ತಮ್ಮ ಶ್ಲಾಘ್ಯವಾದ ಉಕ್ತಿಗಳಿಂದ ಅಂಥವುಗಳನ್ನು ನಿರಸನಮಾಡಿದುದರಿಂದ " ಪ್ರತಿನಂದನೀಯವಿವಿಧೋದಂತಾಃ " ಎಂಬದಾಗಿ ಹೇಳಲ್ಪಟ್ಟರೆಂದು ಭಾವಿಸಬಹುದು. ಆದುದರಿಂದ ವೇದಾಂತೋಕ್ತಿಗಳನ್ನೇ ಸಾಧಿಸುವದು, ಆ ಉಕ್ತಿಗಳಿಗೆ ವಿರೋಧವಾದುದನ್ನು ನಿರಾಕರಿಸುವದು ಇವುಗಳೇ ಉದಂತಗಳೆಂಬ ಭಾವವು. ಇನ್ನೂ ನಮ್ಮಾಚಾರ್ಯರು ಎಂಥಾವರೆಂದರೆ—ಶ್ರದ್ಧಾತವ್ಯಶರಣ್ಯ ದಂಪತಿದಯಾದಿವ್ಯಾಪಗಾವ್ಯಾಪಕಾಃ, ಅಂದರೆ ಶ್ರದ್ಧಾತವ್ಯ - ಭಕ್ತರಿಗೆತನ್ನನ್ನು ಆಶ್ರಯಿಸಲು ಶ್ರದ್ಧೆಯನ್ನು ಹೊಂದಿಸುವ ಗುಣವುಳ್ಳ ಮತ್ತು ಶರಣ್ಯ - ಆಶ್ರಯಿಸಿದನಂತರ ರಕ್ಷಿಸಲು ಶಕ್ತಿಯುಳ್ಳ, ದಂಪತಿ - ಈ ಎರಡು ಗುಣಗಳೂ ಉಳ್ಳ ಲಕ್ಷ್ಮೀನಾರಾಯಣರ, ದಯಾ - ಕೃಪೆಯೆಂಬ, ದಿವ್ಯಾಪಗಾ - ಮಹತ್ತಾದ ಗಂಗಾನದಿಯಲ್ಲಿ, ವ್ಯಾಪಕಾಃ - ಅವಗಾಹನಮಾಡಿದವರು. ಅಂದರೆ, ಲಕ್ಷ್ಮೀನಾರಾಯಣರಿಬ್ಬರಿಗೂ ಶ್ರದ್ಧಾತವ್ಯತ್ವವೂ ಶರಣ್ಯತ್ವವೂ ಉಂಟು, ಉಪಾಯೋಪೇಯತ್ವವೆರಡೂ ಉಂಟು. ಲಕ್ಷ್ಮಿಗೆ "ಪ್ರಣಿಪಾತಪ್ರಸನ್ನಾಹಿ ಮೈಥಿಲೀಜನಕಾತ್ಮಜಾ"

ಎಂಬುವದರಿಂದ ಶ್ರದ್ಧಾತವ್ಯತ್ವವೂ, "ಲಕ್ಷ್ಮ್ಯಾಸಹಹೃಷೀಕೇಶೋ ದೇವ್ಯಾಕಾರುಣ್ಯರೂಪಯಾ । ರಕ್ಷಕಸ್ಸರ್ವಸಿದ್ಧಾಂತೇ ವೇದಾಂತೇಷು ಚಗೀಯತೆ" ಎಂದು ಹೇಳಿರುವಹಾಗೆ, ರಕ್ಷಕಳಾಗಿ ಪ್ರಾಪ್ಯಳೂ, ಮತ್ತು "ಪಾಪಾನಾಂ ವಾ ಶುಭಾನಾಂ ವಾ ವಧಾರ್ಹಾಣಾಂ ಪ್ಲವಂಗಮ । ಕಾರ್ಯಂ ಕರುಣಮಾರ್ಯೇಣ ನ ಕಶ್ಚಿನ್ನಾಪರಾಧ್ಯತಿ" "ಆರ್ಯರಿಗೆ ಪಾಪಿಗಳನ್ನೂ ಕರುಣೆಯಿಂದ ಉದ್ಧಾರಮಾಡುವದು ಯೋಗ್ಯವಾದುದು, ಯಾರುತಾನೇ ಅಪರಾಧಿಗಳಲ್ಲ" ಎಂದು ಆಂಜನೇಯನನ್ನು ಕುರಿತು ಹೇಳಿದ ಸೀತಾವಾಕ್ಯದಿಂದ ಆಕೆಯು ದಯಾಪರಳೂ ಅನುಗ್ರಹಮಯಳೂ ಎಂಬುವದು ವ್ಯಕ್ತಪಡುತ್ತದೆ. ಹಾಗೆಯೇ ನಾರಾಯಣನಿಗೂ "ಸರ್ವಸ್ಯಶರಣಂಸುಹೃತ್", "ಯದಿವಾರಾವಣಸ್ಸ್ವಯಂ", "ಅನೃತಂನೋಕ್ತಪೂರ್ವಂಮೇ ನಚ ವಕ್ಷ್ಯೇಕದಾಚನ" "ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂಮಮ", "ದ್ಯೌಃಪತೇತ್ಪೃಥವೀಶೀರ್ಯೇದ್ಧಿಮವಾಞ್ಶಕಲೀ ಭವೇತ್ । ಶುಷ್ಯೇತ್ತೋಯನಿಧಿಃ ಕೃಷ್ಣೇನಮೇಮೋಘಂ ವಚೋಭವೇತ್" ಅಂದರೆ ಆಕಾಶವು ಬೀಳಬಹುದು, ಭೂಮಿಯು ಶೀಳಬಹುದು, ಹಿಮವತ್ಪರ್ವತವು ಚೂರಾಗಬಹುದು, ಸಮುದ್ರವು ಶೋಷಿಸಿ ಹೋಗಬಹುದು, ನನ್ನಲ್ಲಿ ಮಾತು ಎಂದಿಗೂ ವ್ಯರ್ಥವಾಗಲಾರದು. ಇತ್ಯಾದಿ ವಾಕ್ಯಗಳ ರೀತ್ಯಾ ಶ್ರದ್ಧಾತವ್ಯತ್ವ, ಶರಣ್ಯತ್ವ, ದಯೆ ಇವುಗಳುಂಟೆಂಬುದು ಸಿದ್ಧವು. ಇಂತಹ ಲೋಕದಂಪತಿಗಳ ದಯೆಯನ್ನು ಸಂಪಾದಿಸಿಕೊಂಡಿರುವವರು ನಮ್ಮಾಚಾರ್ಯರು ಎಂದು ಹೇಳುತ್ತಾರೆ. (ದಯೆಯನ್ನು ಗಂಗಾನದಿಗೆ ಹೋಲಿಸಿರುವದರಿಂದ ಗಂಗೆಯು ಹೇಗೆ ಕಲುಷಿತರಾದವರನ್ನು ಪರಿಶುದ್ಧಮಾಡುತ್ತದೆಯೋ ಹಾಗೆ ಸ್ವಾಮಿಯ ದಯೆಯು ನಮ್ಮ ಸಹಸ್ರಾಪರಾಧಗಳನ್ನೂ ಹೋಗಲಾಡಿಸುವಂಥಾದ್ದೆಂಬ ಭಾವವು. ಮತ್ತು ದಯೆಯನ್ನು ನದಿಗೆ ಹೋಲಿಸಿರುವದರಿಂದ ಪ್ರವಾಹದ ಹಾಗೆ ನಿತ್ಯವೂ ಉಂಟಾಗಿ ಆಶ್ರಿತರಕ್ಷಣೋದ್ಯೋಗದಲ್ಲಿದೆ ಎಂಬ ಭಾವವು. ಮತ್ತೂ "ಸ್ಪರ್ಧಾವಿಪ್ಲವ ವಿಪ್ರಲಂಭ ಪದವೀ ವೈದೇಶಿಕಾಃ" ಅಂದರೆ, ಸ್ಪರ್ಧಾ - ಅವಮಾನಪಡಿಸುವದು, ವಿಪ್ಲವ - ಅನಾಚಾರ, ವಿಪ್ರಲಂಭ - ವಂಚನೆ, ಇವುಗಳ, ಪದವೀ -

ಮಾರ್ಗಕ್ಕೆ, ವೈದೇಶಿಕಾಃ - ಬಹಳ ದೂರವಿರುವವರು, ಸ್ವಾಮಿಯಹಾಗೆ ಅನೇಕ ಕಲ್ಯಾಣಗುಣಗಳಾದ ಸೌಲಭ್ಯ,ಸೌಶೀಲ್ಯ,ವಾತ್ಸಲ್ಯ, ದಯಾ ಮೊದಲಾದ ಗುಣಗಳನ್ನು ನಮ್ಮ ಆಚಾರ್ಯರು ಹೊಂದಿರುವರೇ ವಿನಾ ಮೇಲೆ ಹೇಳಿದ ಶ್ರುತಿನಿಂದಿತವಾದ ಹೇಯಗುಣಗಳ ಲೇಶವೂ ಇಲ್ಲದವರೆಂಬದಾಗಿ ಅರ್ಥವು.ಇನ್ನೂ "ವೈದೇಶಿಕಾಃ" ಬಹಳ ದೂರವರ್ತಿಯಾಗಿರುವವರೆಂದು ಹೇಳಿದುದರಿಂದ ಅವರ ಸಂಬಂಧಿಗಳಾದ ಅವರ ಶಿಷ್ಯರಿಗೂ ಕೂಡ ಅಂತಹ ಹೇಯಗುಣಸಂಬಂಧವಿಲ್ಲವೆಂಬ ಭಾವವು. "ಸ್ವದಂತಾಮಿಹ" ಎಂಬದಾಗಿ, ಇಹ - ಈ ಲೋಕದಲ್ಲೇ ಅವರುಗಳು ಭೋಗ್ಯರಾಗಿ ಉಂಟಾಗಲಿ ಎಂಬ ಪ್ರಾರ್ಥನೆಯಭಿಪ್ರಾಯವೇನೆಂದರೆ, ಸ್ವಾಮಿಯೇ ಅವತಾರಗಳನ್ನು ಮಾಡಿ ಅತಿಮಾನುಷಕೃತ್ಯಗಳನ್ನು ಮಾಡಿದರೂ, ಹಾಗೆ ಅವತರಿಸಿದ ರಾಮಕೃಷ್ಣರನ್ನು ಮನುಷ್ಯರನ್ನಾಗಿಯೇ ಭಾವಿಸುವಾಗ, ನಿತ್ಯಸೂರಿಗಳು ಹೀಗೆ ಆಳ್ವಾರಾಚಾರ್ಯರಾಗಿ ಅವತರಿಸಿದ್ದಾರೆಂದು ಭಾವಿಸಿ ಅವರನ್ನು ಹಾಗೆ ಕೃತಜ್ಞತಾಭಾವದಿಂದ ಭೋಗ್ಯರಾದವರೆಂದು ಭಾವಿಸಿ ಪೂಜಿಸುವದು ಈ ಲೋಕದಲ್ಲಿ ದುರ್ಲಭವೆಂತಲೂ ಅಂತಹ ಜ್ಞಾನವು ತಮಗೆ ಇಲ್ಲಿಯೇ ಉಂಟಾಗಿ ಅವರನ್ನು ಪ್ರಿಯರಾಗಿ ಭಾವಿಸುವಹಾಗೆ ಸ್ವಾಮಿಮಾಡಲಿ ಎಂಬದಾಗಿ ಪ್ರಾರ್ಥಿಸುತ್ತಾರೆ.

**ಅವತಾರಿಕೆ**--ಹಿಂದಿನ ಶ್ಲೋಕದಲ್ಲಿ ತನ್ನ ಆಚಾರ್ಯರುಗಳು ಭೋಗ್ಯರಾಗಿ ಪ್ರಿಯವಾಗಿರಲೆಂದು ಪ್ರಾರ್ಥನೆ ಮಾಡಿದರು. ಈ ಶ್ಲೋಕದಿಂದಲೂ "ಹೃದ್ಯಾ" ಎಂದು ಪ್ರಾರಂಭಿಸಿರುವದರಿಂದ ಗುರುಪಙ್ಕ್ತಿಯು ಹೇಗೆ ಪ್ರಿಯವಾದುದಾಯಿತೆಂಬುದನ್ನು ಸಮರ್ಥನೆ ಮಾಡಿ ಹೇಳಿರುತ್ತಾರೆ. ಅವರುಗಳು ನಾಲ್ಕು ದಿಕ್ಕುಗಳಲ್ಲೂ ವಿಶಿಷ್ಟಾದ್ವೈತಸಿದ್ಧಾಂತವನ್ನು ಸ್ಥಾಪನೆ ಮಾಡಿದುದಲ್ಲದೆ, ವಾದಗಳ ಮೂಲಕವಾಗಿಯೂ ಗ್ರಂಥಗಳ ಮೂಲಕವಾಗಿಯೂ ಇತರ ಅಪಸಿದ್ಧಾಂತಗಳನ್ನೆಲ್ಲಾ ಖಂಡಿಸಿ ಜಯಸೂಚಕವಾದ ಧ್ವಜಪಟವನ್ನು ಎತ್ತಿರುತ್ತಾರೆ. ಪರಸಿದ್ಧಾಂತನಿರಸನಮಾಡಿದ ಜಯಸೂಚನೆಗನುಗುಣವಾಗಿ ವೀರರಸಸೂಚಕರೂಪ ಪದಗಳನ್ನೇ ಈ ಶ್ಲೋಕದಲ್ಲಿ ಉಪಯೋಗಿಸಿರುತ್ತಾರೆ.

**ಹೃದ್ಯಾ ಹೃತ್ಪದ್ಮಸಿಂಹಾಸನ ರಸಿಕಹಯಗ್ರೀವಹೇಷೋರ್ಮಿಘೋಷ**
**ಕ್ಷಿಪ್ತಪ್ರತ್ಯರ್ಥಿದೃಪ್ತಿರ್ಜಯತಿ[1] ಬಹುಗುಣಾಪಙ್ಕ್ತಿರಸ್ಮದ್ಗುರೂಣಾಂ।**

ಗಾಳಿಯು ಅರಳೆಯನ್ನು ಹೊಡೆದುಕೊಂಡು ಹೋಗುವದನ್ನನುಕರಿಸುವ ಹಾಗೆ "ಸ್ವಾತಿನಿಧೂರ್ತತತ್ತ್ವಾತ್" ಎಂಬದಾಗಿ ಪ್ರಯೋಗಿಸಿರುತ್ತಾರೆ.

**ಅರ್ಥ**—ಅಸ್ಮದ್ಗುರೂಣಾಂಪಙ್ಕ್ತಿಃ-ನಮ್ಮ ಗುರುಗಳ ಪಙ್ಕ್ತಿಯು, ಜಯತಿ - ಜಯಶೀಲವಾಗಿರುತ್ತದೆ. ವಾಲ್ಮೀಕಿಮಹರ್ಷಿಯೂ "ಜಯತ್ಯತಿಬಲೋರಾಮೋ" ಎಂದು "ಜಯತಿ" ಶಬ್ದಪ್ರಯೋಗವನ್ನು ಹೀಗೆಯೇ ಮಾಡಿರುತ್ತಾರೆ. ಇಲ್ಲಿ ಗುರುಪಙ್ಕ್ತಿಭಜನ ಹೇಗೋ ಹಾಗೆಯೇ ಅಲ್ಲಿಯೂ ರಾಮ, ಲಕ್ಷ್ಮಣ, ಸುಗ್ರೀವರುಗಳನ್ನು ಪರಂಪರೆಯಾಗಿ ಜಯತಿ ಎಂದು ಹೇಳಿರುತ್ತಾರೆ. ಆ ಗುರುಪಙ್ಕ್ತಿ ಎಂಥಾದ್ದೆಂದರೆ, ಬಹುಗುಣಾ - ತುಂಬಾ ಶಮದಮಾದಿ ಮಹಾಭಾಗವತನಲ್ಲಿರಬೇಕಾದ ಸಮಸ್ತ ಕಲ್ಯಾಣಗುಣಗಳನ್ನೂ ಉಳ್ಳದ್ದು. ಇನ್ನೂ ಎಂಥದ್ದೆಂದರೆ, "ಹೃತ್ಪದ್ಮಸಿಂಹಾಸನರಸಿಕ ಹಯಗ್ರೀವ ಹೇಷೋರ್ಮಿಘೋಷ ಕ್ಷಿಪ್ತಪ್ರತ್ಯರ್ಥಿದೃಪ್ತಿಃ" ಅಂದರೆ ಹೃತ್ಪದ್ಮ - ಹೃದಯಕಮಲವೆಂಬ, ಸಿಂಹಾಸನ - ಸಿಂಹಾಸನದಲ್ಲಿ, ರಸಿಕ - ಇಷ್ಟವುಳ್ಳ, ಹಯಗ್ರೀವ - ಹಯಗ್ರೀವರೂಪಿಯಾದ ಪರಮಾತ್ಮನ, ಹೇಷ - ಕೆನೆಯುವ ಶಬ್ದಗಳ, ಊರ್ಮಿ - ಅಲೆಗಳ ಅಂದರೆ ಸಮೂಹಗಳಿಂದ ಕ್ಷಿಪ್ತ - ಕತ್ತರಿಸಲ್ಪಟ್ಟ, ಪ್ರತ್ಯರ್ಥಿ - ಅಪಸಿದ್ಧಾಂತಿಗಳಾದ ಶತ್ರುಪಕ್ಷದ, ದೃಪ್ತಿಃ - ಗರ್ವವುಳ್ಳದ್ದು ಅಂದರೆ ನಮ್ಮ ಹೃದಯದಲ್ಲಿರುವ ಸ್ವಾಮಿ ಹಯಗ್ರೀವನ ಕಟಾಕ್ಷದಿಂದ ನಮ್ಮ ಆಚಾರ್ಯಪಙ್ಕ್ತಿಯು ಇತರ ಅಪಸಿದ್ಧಾಂತಿಗಳ ಗರ್ವಭಂಗವನ್ನು ಮಾಡಿರುತದೆಂದು ಭಾವವು. ಶ್ರೀಮನ್ನಿಗಮಾಂತಮಹಾದೇಶಿಕರು ಹಯಗ್ರೀವೋಪಾಸಕರಾದುದರಿಂದ ಪರಮಾ

---

1 "ಜಯತಿ" ಎಂಬ ಪದವು ... ವ್ಯಾಪ್ತಿ ... ಅ ... ಪ್ರಣಾಳಿಕಾ ... [illegible]

**ದಿಕ್ಸೌಧಾಬದ್ಧ ಜೈತ್ರಧ್ವಜಪಟಪವನಸ್ಫಾತಿ ನಿರ್ಧೂತತತ್ತತ್ಸಿದ್ಧಾಂತ ಸ್ತೋಮತೂಲಸ್ತಬಕ ವಿಗಮನವ್ಯಕ್ತ ಸದ್ವರ್ತನೀಕಾ ॥೩॥**

ತ್ಮನನ್ನುದ್ದೇಶಿಸಿ ಹೇಳುವ ಸಂದರ್ಭದಲ್ಲಿ ಹಯಗ್ರೀವಶಬ್ದ ಪ್ರಯೋಗಿಸುತ್ತಾರೆ. ಮನುಷ್ಯನ ಹೃದಯವು ಸರ್ವೇಶ್ವರನಿಗೆ ಆವಾಸಸ್ಥಾನವು. ಆದುದರಿಂದಲೇ ಶ್ರುತಿಯು "ಹೃದಯಂತದ್ವಿಜಾನೀಯಾದ್ವಿಶ್ವಸ್ಯಾಯತನಂ ಮಹತ್" ಎಂದು ಹೇಳುತ್ತದೆ. ಸರ್ವಭೂತಾಂತರಾತ್ಮನು ಅಲ್ಲಿ ಇರುವದರಿಂದ ಹೃದಯ ಪ್ರದೇಶವು ಆತನಿಗೆ ಆವಾಸಸ್ಥಾನವು. "ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ" ಆ ಹೃದಯದಲ್ಲಿರುವ ಅಗ್ನಿಯ ಮಧ್ಯದಲ್ಲಿ ಪರಮಾತ್ಮನಿದ್ದಾನೆಂದು ಶ್ರುತಿಯು ಹೇಳುತ್ತದೆ. ಮತ್ತು "ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ ಅಂದರೆ ಸರ್ವಭೂತಗಳಿಗೂ ಶೇಷಿಯಾಗಿ ಸ್ವಾಮಿಯಾಗಿರುವ ಪರಮಾತ್ಮನು ನಮ್ಮಗಳ ಹೃದಯಪ್ರದೇಶದಲ್ಲೇ ಇರುತ್ತಾನೆ" ಎಂದು ಗೀತೆಯಲ್ಲಿ ಹೇಳಿರುತ್ತದೆ. ಇನ್ನೂ "ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ" (ಗೀ. ೧೦, ೨೦) "ಸರ್ವಭೂತಾಶಯಸ್ಥಿತಃ" ಸರ್ವಭೂತಗಳ ಹೃದಯದಲ್ಲಿ ಸ್ವಾಮಿಯು ಇರುವನೆಂದು ಹೇಳಿರುತ್ತದೆ. ಇವೇ ಮೊದಲಾದ ಪ್ರಮಾಣಗಳಿಂದ ಸ್ವಾಮಿಯು ನಮ್ಮ ಹೃದಯವನ್ನೇ ಸಿಂಹಾಸನವಾಗಿ ಮಾಡಿಕೊಂಡು ಅಲ್ಲೇ ಪ್ರತಿಷ್ಠಿತನಾಗಿರುವನೆಂಬ ಭಾವದಿಂದ "ಹೃತ್ಪದ್ಮಸಿಂಹಾಸನ ರಸಿಕಹಯಗ್ರೀವನು ಸ್ವಾಮಿಯು ಎಂದು ಹೇಳಿರುತ್ತಾರೆ. ಅಂತಹ ಹಯಗ್ರೀವಸ್ವಾಮಿಯ "ಹೇಷೋರ್ಮಿಘೋಷ" ಅಂದರೆ ಕುದುರೆಯ ಮುಖವುಳ್ಳವರಾದುದರಿಂದ ಕೆನೆಯುವದರ ತರಂಗಘೋಷಗಳಿಂದ, ಕ್ಷಿಪ್ತಪ್ರತ್ಯರ್ಥಿದೃಪ್ತಿಃ, ಕ್ಷಿಪ್ತ - ಕತ್ತರಿಸಲ್ಪಟ್ಟ, ಪ್ರತ್ಯರ್ಥಿ - ಅಪಸಿದ್ಧಾಂತಿಗಳಾದ ಶತ್ರುಪಕ್ಷದವರ, ದೃಪ್ತಿಃ - ಅಹಂಕಾರವುಳ್ಳದ್ದು, ಅಂದರೆ ಶತ್ರುಪಕ್ಷದವರ ಅಪಸಿದ್ಧಾಂತಗಳ ಗರ್ವಭಂಗ ಮಾಡಿದವರು ತಮ್ಮ ಆಚಾರ್ಯರುಗಳು ಎಂದು ಹೇಳುತ್ತಾರೆ. ಇನ್ನೂ ಆ ಗುರುಪಜ್ತಿ ಎಂಥಾದ್ದೆಂದರೆ ಹೇಳುತ್ತಾರೆ. "ದಿಕ್ಸೌಧಾ

ಬದ್ಧಜೈತ್ರಧ್ವಜಪಟಪವನಸ್ಫಾತಿ ನಿರ್ಧೂತತತ್ತ್ವಸಿದ್ಧಾಂತಸ್ತೋಮ ತೂಲಸ್ತಬಕ ವಿಗಮನವ್ಯಕ್ತ ಸದ್ವರ್ತನೀಕಾ '' ಎಂಬದಾಗಿ ಇದು ಒಂದೇ ಪದವು. ದಿಕ್ಸೌಧಾ - ದಿಕ್ಕುಗಳೆಂಬುವ ಸೌಧಗಳಲ್ಲಿ, ಆಬದ್ಧ - ಕಟ್ಟಲ್ಪಟ್ಟ, ಜೈತ್ರಧ್ವಜಪಟ - ಜೈತ್ರಯಾತ್ರೆಯ ಧ್ವಜಪಟಗಳ, ಪವನ - ಘಾಳಿಯು, ಸ್ಫಾತಿ - ಆಧಿಕ್ಯದಿಂದ,-ನಿರ್ಧೂತ- ಕೊಡಹಲ್ಪಟ್ಟ ಅಂದರೆ ಘಾಳಿಯುರಭಸದಿಂದ ಓಡಿಸಲ್ಪಟ್ಟ, ತತ್ತ್ವಸಿದ್ಧಾಂತಸ್ತೋಮ- ಆಯಾ ಅಪಸಿದ್ಧಾಂತಗಳ ಸಮೂಹವೆಂಬ, ತೂಲಸ್ತಬಕ - ಹತ್ತಿಯ ರಾಶಿಗಳ, ವಿಗಮನ - ಹಾರಿಹೋದುದರಿಂದ, ವ್ಯಕ್ತ - ಈಗ ಚೆನ್ನಾಗಿ ತೋರುವ, ಸದ್ವರ್ತನೀಕಾ - ಸಮೀಚೀನವಾದ ಮಾರ್ಗವುಳ್ಳದ್ದು ; ತಮ್ಮ ಆಚಾರ್ಯರುಗಳೂ ಅವರ ಶಿಷ್ಯವರ್ಗವೂ ಸಹ ವಾದಗಳಿಂದಲೂ ಮತ್ತೂ ಅಮೋಘಗ್ರಂಥಗಳಿಂದಲೂ ಅಂತಹ ಅಪಸಿದ್ಧಾಂತಗಳನ್ನೆಲ್ಲಾ ಖಂಡಿಸಿ ತಮ್ಮ ಸಿದ್ಧಾಂತವು ಪ್ರಕಾಶಿಸುವ ಹಾಗೆ ಮಾಡಿದರೆಂಬ ಭಾವವು. ತಮ್ಮ ವಿಶಿಷ್ಟಾದ್ವೈತಸಿದ್ಧಾಂತವನ್ನೇ ಒಂದು ಋಜುವಾದ ಯಥಾರ್ಥವಾದ ಒಳ್ಳೇ ಮಾರ್ಗವೆಂಬದಾಗಿಯೂ, ಆ ಮಾರ್ಗದಲ್ಲಿ ಮಾರ್ಗಕಾಣದಹಾಗೆ ಇತರ ಅಪಸಿದ್ಧಾಂತಗಳೆಂಬ ಅರಳೆಯ ರಾಶಿಗಳು ಬಿದ್ದು ಸರಿಯಾದ ಮಾರ್ಗವೇ ಕಾಣದೇ ಇದ್ದಹಾಗೆಯೂ ನಮ್ಮ ಆಚಾರ್ಯವರ್ಯರು ವಾದಗಳಿಂದಲೂ ಅಮೋಘಗ್ರಂಥಗಳಿಂದಲೂ ಇಂತಹ ಅಪಸಿದ್ಧಾಂತಗಳನ್ನೆಲ್ಲಾ ಗೆದ್ದು ಸ್ಥಾಪಿಸಿದ ಧ್ವಜಪಟಗಳ ಗಾಳಿಯಿಂದ ಈ ಅಪಸಿದ್ಧಾಂತಗಳೆಂಬ ಅರಳೆಯೆಲ್ಲಾ ಹೊಡದುಕೊಂಡು ಹೋದುದರಿಂದ ನಮ್ಮ ಸಿದ್ಧಾಂತವು ಸರ್ವಸಮಂಜಸವಾದುದೆಂಬುವದು ಈಗ ಸ್ಫುಟವಾಗಿ ತೋರುತ್ತದೆಂಬ ತಾತ್ಪರ್ಯವು ಶ್ರೀಮನ್ನಾಥಮುನಿಗಳ '' ನ್ಯಾಯತತ್ತ್ವವೂ, ಶ್ರೀಯಾಮುನೇಯರ ಸಿದ್ಧಿತ್ರಯವೂ, ಶ್ರೀಭಾಷ್ಯಕಾರರ ಶ್ರೀಭಾಷ್ಯವೂ, ಇತರ ಅಪಸಿದ್ಧಾಂತಗಳನ್ನೆಲ್ಲಾ ಖಂಡಿಸಿರುತ್ತವೆ. ಇವರುಗಳು ಸ್ಥಾಪಿಸಿದ ತತ್ತ್ವವನ್ನೇ ಇವರ ಈಚೆಗೆ ಬಂದ ಅನೇಕ ಶಿಷ್ಯಪ್ರಶಿಷ್ಯರಾದ ಮಹನೀಯರುಗಳು ಚನ್ನಾಗಿ ಉಪಪಾದಿಸಿ ಭರತಖಂಡದ ನಾಲ್ಕು ದಿಕ್ಕುಗಳಲ್ಲೂ ಈ ವಿಶಿಷ್ಟಾದ್ವೈತಸಿದ್ಧಾಂತವು ಸ್ಥಿರವಾಗಿ ನೆಲಗೊಳ್ಳುವ

ಹಾಗೆ ಮಾಡಿ ಧ್ವಜಪಟವನ್ನೆತ್ತಿದ್ದಾರೆಂದು ಹೇಳಿಗುತ್ತಾರೆ. ಆಕಾರಣದಿಂದಲೇ ಇಂತಹ ಉತ್ಕೃಷ್ಟಗುರುಪರಂಪರೆಯಲ್ಲಿ ತಮಗೆ ನಿರತಿಶಯವಾದ ಪ್ರೀತಿಪುರಸ್ಸರವಾದ ಭಕ್ತಿಯುಂಟೆಂಬುವದನ್ನು ವ್ಯಕ್ತಪಡಿಸುವದಕ್ಕಾಗಿಯೂ ಇತರರೂ ಕೂಡ ತಮ್ಮ ಹಾಗೆಯೇ ಆಚಾರ್ಯಪರಂಪರೆಯಲ್ಲಿ ಭಕ್ತಿಯನ್ನಿಡಬೇಕೆಂಬುವದನ್ನು ತೋರ್ಪಡಿಸುವದಕ್ಕಾಗಿಯೂ "ಹೃದ್ಯಾ" ಎಂದು ಪ್ರಯೋಗಿಸಿರುತ್ತಾರೆ. ಆ ಶಿಷ್ಯವರ್ಗದಲ್ಲಿ ತಾವೂ ಸೇರಿದವರಾಗಿಯೂ ತಾವೂ ಕೂಡ ವಾದಮೂಲಕವಾಗಿಯೂ, ವಿಪುಳವಾದ ಶತದೂಷಿಣಿ ಮೊದಲಾದ ಗ್ರಂಥಗಳ ಮೂಲಕವಾಗಿಯೂ ಅಂತಹ ಧ್ವಜಪಟವನ್ನೇರಿಸುವ ಕೈಂಕರ್ಯವನ್ನು ತಮ್ಮಿಂದ ಆರಾಧಿತನಾದ ಹಯಗ್ರೀವಮೂರ್ತಿಯ ಕಟಾಕ್ಷಬಲದಿಂದ ತಾವೂ ನಡಿಸಿರುವ ಹಾಗೆ ಧ್ವನ್ಯರ್ಥವು ತೋರುತ್ತದೆ. ಅಥವಾ ಮೇಲೆ ಹೇಳಿದ ಗುರುಪಙ್ತಿಯ ಕೃಪಾಪ್ರಭಾವದಿಂದ ಅಂತಹ ಅಮೋಘ ಕೆಲಸವನ್ನೇ ತಾವೂ ಕೂಡ ನಡಿಸಲು ಸಂದೇಹವಿಲ್ಲವೆಂಬುವ ಕವಿಯ ಆಶಯವೂ ತೋರಿಬರುತ್ತದೆ. ತಮ್ಮ ಸಿದ್ಧಾಂತವು " ವ್ಯಕ್ತಸದ್ವರ್ತನೀಕಾ '' ಎಂದು ಹೇಳಿರುವದರಿಂದ ಈ ಸಿದ್ಧಾಂತವೇನೂ ಹೊಸದಾಗಿ ಕಂಡುಹಿಡಿದುದಲ್ಲವು, ಆರ್ಷವಾಗಿ ವ್ಯಾಸಬೋಧಾಯನಾದಿಗಳು ಕೂಡ ಅವಲಂಬಿಸಿದುದಾದುರಿಂದ ಬಹಳ ಶ್ಲಾಘ್ಯವಾದುದೆಂಬಭಿಪ್ರಾಯವು. ಇನ್ನೂ ಆಚಾರ್ಯಪಙ್ತಿಯು ಎಂಥಾದ್ದೆಂದರೆ " ಬಹುಗುಣಾ " ಅನೇಕ ಕಲ್ಯಾಣಗುಣಗಳಿಂದ ಯುಕ್ತರಾದವರು, ಆಚಾರ್ಯರೆನಿಸಲು ಎಂತಹ ಗುಣಗಳಿರಬೇಕೋ ಅಂತಹ ಎಲ್ಲಾ ಗುಣಗಳನ್ನುಳ್ಳವರೆಂದೂ ಅರ್ಥಹೇಳಬಹುದು. ಮುಂದಕ್ಕೆ ಆಚಾರ್ಯಕೃತ್ಯಾಧಿಕಾರದಲ್ಲಿ ಆ ಗುಣಗಳ್ಯಾವುವು ಎಂಬ ಪ್ರಶಂಸೆಯು ಮುಂದೆ ಜರುಗುತ್ತದೆ. ಆ ಗುಣಗಳನ್ನು " ನ್ಯಾಸವಿಂಶತಿಯ " ಪ್ರಥಮಶ್ಲೋಕದಲ್ಲಿ ಸೂಕ್ಷ್ಮವಾಗಿ ತೋರಿಸಿರುತ್ತಾರೆ.

ಸಿದ್ಧಂ ಸತ್ಸಂಪ್ರದಾಯೆ ಸ್ಥಿರಧಿಯಮನಘಂ ಶ್ರೋತ್ರಿಯಂ ಬ್ರಹ್ಮನಿಷ್ಠಂ
ಸತ್ವಸ್ಥಂ ಸತ್ಯವಾಚಂ ಸಮಯನಿಯತಯಾ ಸಾಧುವೃತ್ತ್ಯಾ ಸಮೇತಂ!

**ಆರಣನೂಲ್ ವಳಿಚ್ಚೆವ್ವೈ ಯಳಿತ್ತಿಡುಮೈದುಕರ್ ಕ್ಕೋರ್**
**ವಾರಣಮಾಯವರ್ ವಾದಕ್ಕತಲಿಗಳ್ ಮಾಯ್‌ತ್ತ ಪಿರಾಣ್ ।**

ಡಂಭಾಸೂಯಾದಿಮುಕ್ತಂ ಜಿತವಿಷಯಗಣಂ ದೀರ್ಘಬಂಧುಂ ದಯಾಳುಂ
ಸ್ಖಾಲಿತ್ಯೇ ಶಾಸಿತಾರಂ ಸ್ವಪರಹಿತಪರಂ ದೇಶಿಕಂ ಭೂಷ್ಣುರೀಪ್ಸೇತ್॥

ಎಂತಹ ಆಚಾರ್ಯನನ್ನು ವರಿಸತಕ್ಕದ್ದೆಂದರೆ ಹೇಳುತ್ತಾರೆ. ಅವರಲ್ಲಿ ಮುಂದೆ ಹೇಳಿರುವ ಗುಣಗಳಿರಬೇಕೆಂಬ ತಾತ್ಪರ್ಯವು.

(ಹೀಗೆ ಗುರುಭಕ್ತಿಯು ತಮಗೆ ಭಕ್ತ್ಯುಪರಮಭೋಗ್ಯವಾದುದೆಂದು ಸಮರ್ಥನಮಾಡಿ ಆ ಆಚಾರ್ಯಪಙ್ಕ್ತಿಯಲ್ಲಿ ಯಾವಯಾವ ಮಹನೀಯರು ಮುಖ್ಯವಾಗಿ ಅನುಸಂಧೇಯರೆಂಬದನ್ನು ತೋರ್ಪಡಿಸುವದಕ್ಕಾಗಿ ಪ್ರತ್ಯೇಕವಾಗಿ ಅಂಥಾವರನ್ನು ಭಜಿಸುತ್ತಾರೆ. ಮುನಿತ್ರಯರಾದ,ಶ್ರೀಭಾಷ್ಯಕಾರರು (ಶ್ರೀರಾಮಾನುಜಮುನಿ), ಆಳವಂದಾರ್ರು (ಶ್ರೀಯಾಮುನಮುನಿ) ಶ್ರೀಮನ್ನಾಥಮುನಿಗಳು ಈ ಮೂವರೂ ಸಿದ್ಧಾಂತಕ್ಕೆ ಮಾಡಿದುಪಕಾರವು ಅಮೋಘವಾದುದರಿಂದ ಮೂರು ಪಾಶುರಗಳಿಂದ ಅವರನ್ನು ಕೊಂಡಾಡುತ್ತಾರೆ. ಮೊದಲು ದರ್ಶನಸ್ಥಾಪಕರಾದ ಶ್ರೀಭಾಷ್ಯಕಾರರನ್ನು ಕುರಿತು ಹೇಳುತ್ತಾರೆ.)

**ಅರ್ಥ**—ಆರಣನೂಲ್ - ಉಪನಿಷತ್ತಿನ ಅರ್ಥಗಳನ್ನು ಪ್ರತಿಪಾದಿಸುವ ವೇದಾಂತಶಾಸ್ತ್ರದ (ಇದು ವ್ಯಾಸಸೂತ್ರಗಳಲ್ಲಿ ಅಡಗಿರುವಂಥಾದ್ದು) ವಳಿಚ್ಚೆವ್ವೈ - ಋಜುವಾದ ಮಾರ್ಗವು, (ಉಪನಿಷತ್ತುಗಳಿಗೆ ಲಾಕ್ಷಣಿಕಾರ್ಥಗಳನ್ನು ಹೇಳದೆ ಸಮಂಜಸವಾದ ಅರ್ಥಗಳನ್ನು ಹೇಳುವದು. ಇದರಿಂದ ಭಗವಂತನು ಸರ್ವಸ್ವವನ್ನೂ ಶರೀರವಾಗಿ ಹೊಂದಿ ಅವುಗಳಿಗೆ ಆತ್ಮಾವಾಗಿಯೂ, ದಿವ್ಯಮಂಗಳವಿಗ್ರಹಯುಕ್ತನಾಗಿಯೂ ಉಭಯವಿಭೂತಿಯುಕ್ತನಾಗಿಯೂ, ಕಲ್ಯಾಣಗುಣಪರಿಪೂರ್ಣನಾಗಿಯೂ, ಅವಿದ್ಯಾದಿ ಹೇಯಗುಣರಹಿತನಾಗಿಯೂ ತಿಳಿಯೋಣವು.) ಇದನ್ನು ಅಳಿತ್ತಿಡುಂ - ನಾಶಮಾಡುವ, ಐದುಕರ್ - ವೇದಬಾಹ್ಯರಾಗಿಯೂ ವೇದಗಳಿಗೆ ಅಪಾರ್ಥಹೇಳುವದರಿಂದ ಕುದೃಷ್ಟಿಗಳೆಂದು

**ಏರಣಿ ಕೀರ್ತಿಯಿ ರಾಮಾನುಜಮುನಿ ಇನ್ನುರೈ ಶೇರ್**
**ಶೀರಣಿಶಿಂತ್ಯೆಯಿನೋಂ ಶಿಂತೆಯೋಮಿನಿತ್ತೀವಿನ್ನೈಯೆ ॥೪॥**

ಹೇಳಿಸಿಕೊಳ್ಳುವ ೧೭ ವಿಧ ಸಿದ್ಧಾಂತಿಗಳಿಗೆ, ಒರ್‌ವಾರಣಮಾಯ್ - ಒಂದು ಅದ್ವಿತೀಯಮತ್ತಗಜವಾಗಿ, (ಕೆಲವರು ವೇದಕ್ಕೆ ಪ್ರಾಮಾಣ್ಯವನ್ನು ಕೊಡದೆ ಯುಕ್ತಿಗಳನ್ನು ತಂದು ಅಶಾಸ್ತ್ರೀಯ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಇನ್ನು ಕೆಲವರು ಮನಸ್ಸಿನಲ್ಲಿ ತಾನೇ ಪರಮಾತ್ಮನು ಎಂಬೀ ಮೊದಲಾದ ತಪ್ಪು ಅಭಿಪ್ರಾಯಗಳನ್ನು ಇಟ್ಟುಕೊಂಡು ತದನುಸಾರವಾಗಿ ಶ್ರುತಿಗಳಿಗೆ ಅರ್ಥಕಲ್ಪನೆಮಾಡುವರು. ಇವರುಗಳು ಸರಿಯಾಗಿ ಸಮಂಜಸವಾಗಿ ತೋರುವ ಅರ್ಥಗಳನ್ನು ಬಿಟ್ಟು ಬೇರೆ ಅರ್ಥಗಳನ್ನು ಬೋಧಿಸುವರು. ಇಂತಹ ಅಪಸಿದ್ಧಾಂತಗಳನ್ನೆಲ್ಲಾ ಬಹುಸುಲಭವಾಗಿ ತಮ್ಮ ಶ್ರೀ ಭಾಷ್ಯಾದಿ ಗ್ರಂಥಗಳಿಂದ ಶ್ರೀಭಾಷ್ಯಕಾರರು ನಿರಸನಮಾಡಿದರು ಎಂಬಭಿಪ್ರಾಯವು.) ಅವರ್ ವಾದಕ್ಕದಲಿಗಳ್ - ಆ ಬಾಹ್ಯ ಕುದೃಷ್ಟಿಗಳ ವಾದವೆಂಬ ಬಾಳೇಗಿಡಗಳನ್ನು, ಮಾಯ್‌ತ್ತ - ಛೇದಿಸಿದ, ಪಿರಾನ್-ಪರಮೋಪಕಾರಕರಾದ, ಏರಣಿಕೀರ್ತಿಯ-ಭೂಮಿಗೆ ಅಲಂಕಾರವಾದ ಕೀರ್ತಿಯುಳ್ಳ, ಇರಾಮಾನುಶಮುನಿ - ಶ್ರೀಭಗವಾನ್ ರಾಮಾನುಜಾಚಾರ್ಯರವರ, ಇನ್ನುರೈ ಶೇರ್, ಇನ್ - ಮನೋಹರವಾದ, ಪರಮಭೋಗ್ಯವಾದ, ಉರೈ - ದಿವ್ಯ ಸೂಕ್ತಿಗಳ, ಶೇರ್ - ಸಂಬಂಧದಿಂದ ಅಂದರೆ ಪರಿಚಯದಿಂದ, (ಬಾಹ್ಯಕುದೃಷ್ಟಿಗಳ ವಾದವನ್ನು ಬಾಳೇಗಿಡಕ್ಕೆ ಹೋಲಿಸಿರುವದರಿಂದ, ಆನೆಗೆ ಬಾಳೇಗಿಡದ ನಿರಸನವು ಎಷ್ಟು ಸುಲಭವೋ ಅಷ್ಟು ಸುಲಭವಾಗಿ ಶ್ರೀಭಾಷ್ಯಕಾರರು ಕುದೃಷ್ಟಿಬಾಹ್ಯರ ವಾದಗಳನ್ನು ಶ್ರೀಭಾಷ್ಯದಲ್ಲಿ ಮಾಡಿರುತ್ತಾರೆಂದು ಭಾವವು. ಶ್ರೀಭಾಷ್ಯಸೂಕ್ತಿಯ ಭೋಗ್ಯತೆಯಲ್ಲಿ ಸ್ವಾಮಿ ನಿಗಮಾಂತದೇಶಿಕರಿಗೆ ಪರಮಾದರವು. ಆದುದರಿಂದ " ಯತಿಪ್ರವರ ಭಾರತೀರಸಭರೇಣ ನೀತಂವಯಃ " ತಮ್ಮ ಆಯುಸ್ಸೆಲ್ಲಾ ಯತಿರಾಜರ ದಿವ್ಯ ಸೂಕ್ತಿಗಳ ಸ್ವಾರಸ್ಯಗ್ರಹಣದಲ್ಲೇ ಕಳೆದೆನು ಎಂದು ಅಭೀತಿಸ್ತವದಲ್ಲಿ ಹೇಳಿರುತ್ತಾರೆ.

ಆದುದರಿಂದ " ಇಕ ಉರೈ " ಅವರ ದಿವ್ಯ ಸೂಕ್ತಿಗಳು ಪರಮಭೋಗ್ಯವಾದುವೆಂಬುದಾಗಿ ಹೇಳಿರುತ್ತಾರೆ. ಆದುದರಿಂದ ನಮ್ಮ ಸಿದ್ಧಾಂತಸ್ಥಾಪಕರು ಏನು ಹೇಳುತ್ತಾರೆಂಬುವದನ್ನೂ ತಿಳಿದುಕೊಳ್ಳಲು ಪ್ರಯತ್ನಕೂಡ ಮಾಡದಿರುವದು ಶೋಚನೀಯವಾದುದಲ್ಲವೆ ? ಅಂತಹ ದಿವ್ಯ ಸೂಕ್ತಿಗಳ ಪರಿಚಯದಿಂದ, ಶೀರಣಿಶಿಂದಿಯನೋಂ, ಶೀರ್ - ಕಲ್ಯಾಣಗುಣಗಳಿಂದ, ಅಣಿ-ಹೊಂದಲ್ಪಟ್ಟ, ಶಿಂದಿಯನೋಂ - ಮನಸ್ಸುಳ್ಳವರಾದ ನಾವು (ಅಂತಹ ಶ್ಲಾಘ್ಯವಾದ ಸೂಕ್ತಿಗಳಿಂದ ನಮ್ಮ ಜ್ಞಾನವು ಪರಿಶುದ್ಧವಾದುದಾಗಿ ಸತ್ವೋದ್ರೇಕವು ಹೆಚ್ಚಿದ ಮನಸ್ಸುಳ್ಳವರಾದ ನಾವು) ಇನಿತ್ತು - ಇನ್ನುಮೇಲೆ, ಅಂದರೆ ಶ್ರೀಭಾಷ್ಯಕಾರ ಸೂಕ್ತಿರಸಾಸ್ವಾದನವಾದ ನಂತರ, ತೀವಿನೈಯ್ಯೈ - ಪಾಪಗಳನ್ನು, ಶಿಂತೆಯೋಂ - ಚಿಂತಿಸುವದಿಲ್ಲವು. ಶರಣಾಗತಿಮಾಹಾತ್ಮ್ಯೆಯನ್ನು ಅವರ ಶ್ರೀಭಾಷ್ಯಶರಣಾಗತಿಗದ್ಯ ಮುಂತಾದವುಗಳಿಂದರಿತವರಾಗಿ ಪ್ರಪದನಾನುಷ್ಠಾನಮಾಡಿ ದ್ವಯಾನುಸಂಧಾನಮಾಡುವ ನಮ್ಮಗಳಿಗೆ ಇನ್ನು ಕ್ರೂರವಾದ ನಮ್ಮ ಪಾಪಗಳ ಭಯವೆಲ್ಲಿರುತ್ತದೆ ? ಸ್ವಾಮಿಯ ಅನುಗ್ರಹವು ನಮ್ಮಗಳಿಗೆ ಸ್ವತಸಿದ್ಧವಾದುದೆಂಬ ಭಾವವು.)

**ತಾತ್ಪರ್ಯ**—ಶ್ರೀಭಾಷ್ಯಮೊದಲಾದ ಒಂಭತ್ತು ಅಮೋಘ ಕೃತಿಗಳನ್ನು ಬರದು ಇತರ ಚಾರ್ವಾಕ, ಬೌದ್ಧ, ಜೈನ ಮೊದಲಾದ ಕುವಾದಿಗಳನ್ನೂ ಶಾಂಕರ ಮೊದಲಾದ ವೇದಗಳಿಗೆ ಅಪಾರ್ಥಗಳನ್ನು ಹೇಳುವ ವಾದಿಗಳನ್ನೂ ನಿರಸನಮಾಡಿ, ವೇದಗಳಿಗೆ ಸರ್ವಸಮಂಜಸಾರ್ಥಗಳನ್ನು ಹೇಳಿ, ಜೀವಶೇಷತ್ವವನ್ನು ಸ್ಥಾಪನಮಾಡಿ, ಹೀಗೆ ಪರಮೋಪಕಾರವನ್ನು ಮಾಡಿ ಯಶಸ್ಸನ್ನು ಪಡೆದ ಮಹಾನುಭಾವರಾದ ಶ್ರೀಭಾಷ್ಯಕಾರರ ದಿವ್ಯಸೂಕ್ತಿಗಳಿಂದ ನಮ್ಮ ಮನಸ್ಸಿನ ಕಲ್ಮಷಗಳೆಲ್ಲಾ ಕಳದು ಮನವು ಪವಿತ್ರತೆಯನ್ನು ಹೊಂದಿತು. ಇನ್ನು ಮುಂದೆ ತಮಗೆ ಪಾಪಗಳ ಭೀತಿ ಇಲ್ಲವೆಂಬಭಿಪ್ರಾಯವು.

ಅನಂತರ ಇಂತಹ ಶ್ರೀಭಾಷ್ಯಕಾರರಿಗೂ ಗುರುಕೋಟಿಯಲ್ಲಿದ್ದು, ನಮ್ಮ ದರ್ಶನಸ್ಥಾಪನೆಗೆ ತುಂಬಾ ಉತ್ತೇಜನವನ್ನು ಕೊಟ್ಟು, ಶ್ರೀಭಾಷ್ಯಕಾರರಿಗೆ ದರ್ಶನಸ್ಥಾಪನೆ ವಿಷಯದಲ್ಲಿ ಏನೇನು ಮಾಡಬೇ

**ನೀಳವಂದಿನ್ರು ವಿಧಿವಕ್ಕೈಯಾಲ್ ನಿನ್ನೈವೋನ್ರಿಟು ನಾಂ**
**ಮೀಳವಂದಿನ್ನುಂ ವಿನೈಯುಡಂ ಪೊನ್ರಿವಿಳುಂದುಳಲಾ ।**

ಕೆಂಬ ತಮ್ಮ ಅಭಿಪ್ರಾಯಗಳನ್ನು ತಿಳಿಸಿ ಅಮೋಘಗ್ರಂಥಗಳನ್ನು ದಯಪಾಲಿಸಿ, ಆಗಿನ ರಾಜರುಗಳು ಶೈವಸಿದ್ಧಾಂತಗಳಿಗೆ ಕೊಡುತ್ತಿದ್ದ ಉತ್ತೇಜನವನ್ನು ಮುರಿದು ವೈಷ್ಣವ ಸಿದ್ಧಾಂತಸ್ಥಾಪನೆ ಮಾಡುವ ಹಾಗೆ ಮಾಡಿ, ಇಷ್ಟು ಪರಮೋಪಕಾರಮಾಡಿದುದಕ್ಕಾಗಿ ಶ್ರೀ ಆಳವಂದಾರ್ರವರನ್ನು ಈ ಪಾಶುರದಿಂದ ಸ್ತೋತ್ರ ಮಾಡಿರುತ್ತಾರೆ.

**ಅರ್ಥ**—ನೀಳ - ಬಹುಕಾಲವು, ವಂದು - ಬಂದು ಅಂದರೆ ಸಂಸಾರದಲ್ಲಿ ಬಂದು, ಜೀವನು ಈ ಸಂಸಾರದಲ್ಲಿ ಪುನಃಪುನಃ ಸೃಷ್ಟಿಗಳ ಮೊದಲು ಏತತ್ಪರ್ಯಂತ ತೊಳಲಿರುತ್ತಾನೆ. "ವೃಥೈವ ಭವತೋ ಯಾತಾ ಭೂಯಸೀ ಜನ್ಮಸಂತತಿಃ" ಎಂದು ಹೇಳಿರುವ ಮೇರಿಗೆ ಪುನಃಪುನಃ ಜನ್ಮಸಮೂಹಗಳನ್ನೆತ್ತಿ ಸಂಸಾರದಲ್ಲಿ ತೊಳಲಿದುದೆಲ್ಲಾ ವ್ಯರ್ಥವಾದುವಾಗಿ ಎಂಬ ಭಾವವು, ಇನ್ರು - ಈ ಜನ್ಮದಲ್ಲಿ, ವಿದಿವಕ್ಕೈಯಾಲ್ - ಭಗವತ್ಕೃಪಾಯುಕ್ತವಾದ ಭಾಗ್ಯಾತಿಶಯದಿಂದ, ನಿನ್ನೈವು - ಶೇಷತ್ವಜ್ಞಾನವನ್ನು ಒನ್ರಿಯನಾಂ - ಹೊಂದಿದ ನಾವುಗಳು, ಮೀಳವಂದು - ಪುನಃ ಸಂಸಾರವನ್ನು ಪ್ರವೇಶಿಸಿ, ಇನ್ನುಂ - ಇನ್ನು ಮೇಲೆ, ವಿನೈಯುಡಂಬು - ಪಾಪಿಷ್ಠವಾದ ಈ ಪ್ರಕೃತಿಸಂಬಂಧವುಳ್ಳ ದೇಹದೊಂದಿಗೆ, ಒನ್ರಿ - ಏಕೀಭವಿಸಿ, ವಿಳಂದುಳಲಾದು - ಈ ಸಂಸಾರವೆಂಬ ಗುಂಡಿಯಲ್ಲಿ ನಾವು ಬೀಳದಹಾಗೆ, ನಮ್ಮೈ ಆಳವಂದಾರೆನ - ನಮ್ಮನ್ನು ರಕ್ಷಿಸಲು ಬಂದರು ಎಂಬ ಅನ್ವರ್ಥನಾಮಧೇಯವುಳ್ಳ, ವೆನ್ನು - (ರಾಜಾಸ್ಥಾನದಲ್ಲಿದ್ದ ರಾಜಪುರೋಹಿತನಾದ ಅಕ್ಕಿಯಾಳ್ವಾನೆಂಬ ಶೈವಸಿದ್ಧಾಂತಿಯನ್ನು) ಗೆದ್ದು, ಅರುಳ್‌ತಂದು - ನಮ್ಮಲ್ಲಿ ಕೃಪೆಯನ್ನು ಮಾಡಿ, ವಿಳಂಗಿಯಶೀರ್ - ಪ್ರಕಾಶಮಾನವಾದ ಕೀರ್ತಿಯುಳ್ಳ, ಳವಂದಾರ್ - ಶ್ರೀಯಾಮುನಮುನಿಗಳ, ಅಡಿಯೋಂ - ದಾಸರಾದ ನಾವು, ಇನಿ - ಇನ್ನುಮೇಲೆ, ಅಲ್‌ವಳಕ್ಕು, ಅಪಸಿದ್ಧಾಂತಗಳನ್ನು, ಪಡಿಯೋಂ - ಓದುವದಿಲ್ಲ.

**ತಾಳವಂಬಾರೆನ ವನ್ತುರುಳ್ ತಂದು ವಿಳಂಗಿಯತೀರ್**
**ಆಳವಂದಾರಡಿಯೋಂ ಪಡಿಯೋಮಿನಿಯೆಲ್ ವಳಕ್ಕೆ ॥೫॥**

**ತಾತ್ಪರ್ಯ**—" ಬಹೂನಿಮೇವ್ಯತೀತಾನಿ ಜನ್ಮಾನಿತವಚಾರ್ಜುನ[1]" ಎಂಬಲ್ಲಿಯೂ "ಬಹೂನಾಂಜನ್ಮನಾಮಂತೇ[2]" ಎಂಬಲ್ಲಿಯೂ ಮತ್ತು " ಪುನರಪಿಜನನಂ ಪುನರಪಿ ಮರಣಂ ಪುನರಪಿಜನನೀ ಜಠರೇ ಶಯನಂ " ಎಂಬಲ್ಲಿಯೂ ತೋರುವಹಾಗೆ ಸೃಷ್ಟಿಗಳ ಮೊದಲುಗೊಂಡು, ಇನ್ನೂ ಈ ಕರ್ಮಭೂಮಿಯಲ್ಲೇ ನಾವು ಇರುವದರಿಂದ ಅನೇಕ ಜನ್ಮಸಂತತಿಗಳನ್ನು ಮರುಕಾಂತಾರರೂಪದಲ್ಲಿರುವ ಈ ಪೃಥ್ವಿಯಲ್ಲಿಯೂ ಇತರ ಕಡೆಯಲ್ಲಿಯೂ ಎತ್ತಿದೆವು ಈ ದೇಹವೇನೋ " ಜಾಯಮಾನಂಹಿಪುರುಷಂ ಯಂ ಪಶ್ಯೇನ್ಮಧುಸೂಧನಃ " ಎಂಬಂತೆ, ಸ್ವಾಮಿಯ ಕಟಾಕ್ಷದಿಂದುಂಟಾಗಿರುವದರಿಂದ ಈಗಲುತ್ತಮ ಜನ್ಮವು ಪ್ರಾಪ್ತವಾಗಿರುತ್ತದೆ."ಬ್ರಾಹ್ಮಣೇಷ್ವಪಿ ವೇದಜ್ಞೋ ಹ್ಯರ್ಥಜ್ಞೋ ಹ್ಯಧಿಕಸ್ತತಃ।ಅರ್ಥಜ್ಞಾತ್ಸಂಶಯಚ್ಛೇತ್ತಾ" ಅಂದರೆ ಎಲ್ಲಾ ವರ್ಣದವರಿಗಿಂತಲೂ ಬ್ರಾಹ್ಮಣ ಶ್ರೇಷ್ಠನು,ಅವರಲ್ಲಿ ವೇದಾಧ್ಯಾಯಿಯು ಶ್ರೇಷ್ಠನೆಂತಲೂ ಅದರಲ್ಲೂ ವೇದಾರ್ಥಗಳನ್ನು ಚೆನ್ನಾಗಿ ತಿಳಿದ ವೈಷ್ಣವನು ಶ್ರೇಷ್ಠನೆಂತಲೂ, ಅವರುಗಳಲ್ಲೂ ಸಂಶಯಗಳನ್ನು ಹೋಗಲಾಡಿಸಿ ಸಮಂಜಸವಾದ ಜ್ಞಾನವನ್ನುಂಟುಮಾಡುವವನು ಶ್ರೇಷ್ಠನು ಎಂದು ಹೀಗೆಲ್ಲಾ ಹೇಳಿರುವದರಿಂದ ಒಳ್ಳೇ ವೈಷ್ಣವ ಬ್ರಾಹ್ಮಣಕುಲದಲ್ಲಿ ಜನ್ಮವು ಸ್ವಾಮಿಕಟಾಕ್ಷದಿಂದ ದೊರತಿರುತ್ತದೆ. ಇಂತಹ ಸುಸಮಯವಲ್ಲೇ, ದೇಹವೇ ಆತ್ಮಾ ಎಂಬ ಭ್ರಾಂತಿಯನ್ನು ತೊರೆದು ಈ ಪ್ರಾಕೃತದೇಹವು ಪುನಃ ಬಾರದ ಹಾಗೆ ಮಾಡಿಕೊಳ್ಳಲಿ ಎಂಬ ಉದಾರಭಾವದಿಂದ ನಮ್ಮನ್ನು ರಕ್ಷಿಸಲು ಏನಾದರೂ ಬಂದರೊ ಎಂಬ ಅರ್ಥವತ್ತಾದ ಆಳವಂದಾರೆಂಬ ಅಪರ ನಾಮವನ್ನು ಹೊಂದಿದ, ಮಾತದ ರಾಜಪುರೋಹಿತನಾದ ಶೈವಸಿದ್ಧಾಂತಿಯ ಗರ್ವಭಂಗವನ್ನು ಮಾಡಿ

1 ಗೀತೆ ೪, ೫. 2 ಗೀತೆ ೭, ೯.

**ಕಾಳಂ ವಲಂಪುರಿಯನ್ನ ನಲ್ಕಾದಲ ಯಡಿಯವರ್ಕ್ಕು**
**ತ್ತಾಳಂ ವಳಂಗಿತ್ತಮಿಳ್‌ಮರೈ ಯಿನ್ನಿಶೈ ತಂದವಳ್ಳಲ್ ।**

ಶ್ರೀಯಾಮುನಮುನಿಗಳ ಪಾದಕಮಲವನ್ನು ಭಜಿಸಿ ಧನ್ಯರಾಗಿರುತ್ತೇವೆ. ಅವರ ಸಿದ್ಧಾಂತವನ್ನು ಗ್ರಹಿಸಿದ ನಂತರ ಇತರ ತುಚ್ಛ ಅಪಸಿದ್ಧಾಂತಗಳನ್ನು ನಾವು ಇನ್ನುಮೇಲೆ ಕಣ್ಣೆತ್ತಿ ಕೂಡ ನೋಡುವದಿಲ್ಲವು ಎಂಬಭಿಪ್ರಾಯವು.

(ಶ್ರೀಯಾಮುನಮುನಿಗಳು ಶೈವರಾದ ಅಕ್ಕಿಯಾಳ್ವಾನನ್ನು ಗೆದ್ದು ತಮ್ಮ ಮತವನ್ನು ಅವರು ಅವಲಂಬಿಸುವಹಾಗೆ ಮಾಡಿದ ಉಪಾಖ್ಯಾನವು ಶ್ರೀ ಆಳವಂದಾರರ ಸಂಗ್ರಹಚರಿತ್ರೆ ಪುಟಗಳು ೮೪-೮೬ ರಲ್ಲಿ ಉಪಪಾದಿಸಲ್ಪಟ್ಟಿದೆ.)

(ಈ ಮುಂದಿನ ಪಾಶುರದಿಂದ ಆಳವಂದಾರಿಗೆ ಪಿತಾಮಹರಾಗಿಯೂ ಆಚಾರ್ಯರಾಗಿ, ದ್ರಾವಿಡ ಪ್ರಬಂಧಗಳನ್ನು ಪ್ರಚುರಗೊಳಿಸಿದವರಾಗಿಯೂ ಇರುವ ನಾಥಮುನಿಗಳ ಅನುಸಂಧಾನವು ಕರ್ತವ್ಯವೆಂದು ಭಾವಿಸಿ ಅವರನ್ನು ಸ್ತುತಿಸುತಾರೆ.)

**ಅರ್ಥ**— ಕಾಳಂ - ಕಾಹಳೆ, ವಲಂಪುರಿ - ಬಲಮುರಿಶಂಖ ಇವುಗಳ ಜಯಘೋಷಧ್ವನಿಗೆ, ಅನ್ನ - ಸಮಾನರಾದ, ನಲ್ - ಸಮೀಚೀನವಾದ, ಕಾದಲ್ - ಗುರುಭಕ್ತಿಯುಳ್ಳ, ಅಡಿಯವರ್ಕ್ಕು - ದಾಸರಾದ ಅಂದರೆ ಶಿಷ್ಯರಾದ (ತಮ್ಮ ಸೋದರಳಿಯಂದಿರಾದ) ಮೇಲೆಯಕತ್ತಾಳ್ವಾನ್, ಕೀಳಯಕತ್ತಾಳ್ವಾನ್ ಇವರಿಬ್ಬರಿಗೂ, ತಾಳಂ - ತಾಳಶಾಸ್ತ್ರವನ್ನು (ದೇವಗಾನಶಾಸ್ತ್ರ), ವಳಂಗಿ - ಕೊಟ್ಟು ಅಂದರೆ ಉಪದೇಶಿಸಿ, ತಮಿಳ್‌ಮರೈ - ದ್ರಾವಿಡ ವೇದವಾದ ದಿವ್ಯಪ್ರಬಂಧದ, ಇನ್ನಿಶೈ - ಪರಮಭೋಗ್ಯವಾದ ಗಾನವನ್ನು, ತಂದ - ಕೊಟ್ಟ, ವಳ್ಳಲ್ - ಪರಮೋದಾರ ಸ್ವಭಾವವುಳ್ಳ, ಮತ್ತು ಮೂಳುಂ - ಆದರದಿಂದ, ತವನೆರಿ - ತಪೋಮಾರ್ಗವನ್ನು ಅಂದರೆ ಮುಮುಕ್ಷುಗಳಿಂದನುಷ್ಠೇಯವಾದ ಭಕ್ತಿಪ್ರಪತ್ತಿಮಾರ್ಗಗಳನ್ನು, ಮೂಟ್ಟಿಯ - ಲೋಕದ ಜನರು ಪ್ರವರ್ತಿಸುವಹಾಗೆ ಮಾಡಿದ, ನಾಥಮುನಿ - ನಾಥಮುನಿಗಳ

**ಮೂಳುಂ ತವನೆರಿ ಮೂಟ್ಟಿಯನಾಥಮುನಿ ಕಳಲೇ**
**ನಾಳುಂ ತೊಳು ತೆಳುವೋಮ್ ನಮಕ್ಕಾರ್ ನಿಕರ್ ನಾನಿಲತ್ತೇ ॥೬॥**

ಕಳಲೆ - ಪಾದಗಳಿಗೆ, ನಾಳುಂ-ಪ್ರತಿದಿನದಲ್ಲೂ, ತೊಳುದು-ಪ್ರಣಾಮ ವನ್ನು ಮಾಡಿ, ಎಳವೋಂ - ನಾವು ಉಜ್ಜೀವಿಸುವೆವು. ಆದುದರಿಂದ ನಮುಕ್ಕಾರ್ - ನಮಗೆ ಯಾರು, ಈನಾನಿಲತ್ತೆ - ನಾಲ್ಕುವಿಧ ಭೂ ಭಾಗದಲ್ಲಿ, ನಿಕರ್ - ಸಮಾನರು ಅಂದರೆ ನಮ್ಮಂಥಾ ಭಾಗ್ಯಶಾಲಿ ಗಳ್ಯಾರು ಎಂಬರ್ಥವು.

**ತಾತ್ಪರ್ಯ**—"ಕಾಳಂ ವಲಂಪುರಿಯನ್ನ" ಎಂದು ಹೇಳಿರುವದು ತಮ್ಮ ಸೋದರಳಿಯಂದಿರಿಗೆ ಮಾಡಿದ ಉಪದೇಶಗಳಿಂದ ಅಪಸಿದ್ಧಾಂತ ಗಳೆಲ್ಲಾ ನಿರಾಕರಿಸಲ್ಪಟ್ಟು ತಮ್ಮ ಸಿದ್ಧಾಂತಸ್ಥಾಪನೆಯ ಜಯ ಘೋಷ ವನ್ನು ಸೂಚಿಸುತ್ತದೆ. ಇವರು ನಮ್ಮಾಳ್ವಾರನ್ನು ಸಾಕ್ಷಾತ್ಕರಿಸಿ ಅಧಿಕ ರಿಸಿದ ದ್ರಾವಿಡಪ್ರಬಂಧದ ದೇವಗಾನಸದೃಶವಾದ ಗಾನವೂ ತಾಳವೂ ಅವರಲ್ಲತಗಿರುವ ಸಿದ್ಧಾಂತವೂ ಸಹ, ಎಲ್ಲರನ್ನು ವಶಮಾಡಿಕೊಳ್ಳುವ ಶಕ್ತಿ ಇರುವದರಿಂದ ಕಾಳಂವಲಂಪುರಿಯಹಾಗೆ ಇರುವ ತಮ್ಮ ಸೋದರಳಿಯಂದಿರ ಮೂಲಕ ಜಯಘೋಷವನ್ನು ಹೊಂದಿತು ಎಂಬ ಭಿಪ್ರಾಯವು. ಶ್ರೀಮನ್ನಾಥಮುನಿಗಳು ತಾವು ಅಧಿಕರಿಸಿದ ತಿರು ವಾಯ್ಮೊಳಿಯನ್ನು ತಮ್ಮ ಸೋದರಳಿಯಂದಿರಾದ ಕೀಳೈಯ ಗತ್ತಾಳ್ವಾರ್, ಮೇಲೈಯಗತ್ತಾಳ್ವಾರರವರಿಗೆ ದಿವ್ಯ ದೇವಗಾನ ದೋಪಾದಿಯಲ್ಲಿ ಹಾಡುವಹಾಗೆ ಉಪದೇಶಿಸಿದರಾದಕಾರಣ ಅವ ರಿಗ ತಮ್ಮ ಗುರುಗಳಾದ ಶ್ರೀಮನ್ನಾಥಮುನಿಗಳಲ್ಲಿ "ಯಥಾದೇವೇ ತಥಾಗುರೌ" ಎಂಬುವ ಹಾಗೆ ನಿರತಿಶಯಭಕ್ತಿ ಇತ್ತೆಂದು ಹೇಳುವ ದಕ್ಕಾಗಿ "ನಲ್ಕಾತಲ್" ಎಂದು ಪ್ರಯೋಗಿಸಿರುತಾರೆ. ಶ್ರೀಮ ನ್ನಾಥಮುನಿಗಳು ಯೋಗಾಭ್ಯಾಸನಿರತರಾಗಿ, ಯೋಗಮಾಹಾತ್ಮ್ಯೆಯ ನ್ನೂ ಪ್ರಪತ್ತಿಮಾರ್ಗದ ಸ್ವಾರಸ್ಯವನ್ನೂ ಅರಿತವರಾಗಿ, ಈ ಲೋಕದ ಜನರು ಉಜ್ಜೀವಿಸಲಿ ಎಂಬ ಪರಮೋದಾರ ಭಾವದಿಂದ ಇತರರಿಗೆ ಉಪದೇಶಿಸಿದುದರಿಂದ "ತಂದವಳ್ಳಲ್" ಎಂಬ ಪ್ರಯೋಗವನ್ನೂ

" ಮೂಳುಂತವನೆರಿಮೂಟ್ಟಿಯು " ಎಂಬ ಪ್ರಯೋಗವನ್ನೂ ಮಾಡಿರುತ್ತಾರೆ. ಆದುದರಿಂದ ಶ್ರೀಯಾಮುನೇಯರು " ಲೋಕೇವತೀರ್ಣಪರಮಾರ್ಥಸಮಗ್ರಭಕ್ತಿಯೋಗಾಯ ನಾಥಮುನಯೇಯಮಿನಾಂವರಾಯ " ಎಂದು ಹೇಳಿರುತ್ತಾರೆ. " ನಾಥಮುನಿಕಳಲೇ " ಎಂಬಲ್ಲಿಯ ' ಏವ ' ಎಂಬ ಅವಧಾರಣದ ಅಭಿಪ್ರಾಯವು, ಇಂತಹ ಭಾಗವತ ಪ್ರಪತ್ತಿಯಿಂದಲೆ ಸ್ವಾಮಿಯಿಂದ ನಾವು ಪಡೆಯಬಹುದಾದ ಸಕಲ ಮನೋರಥಗಳನ್ನೂ ಪಡೆಯಬಹುದೆಂಬುವದನ್ನು ಸೂಚಿಸುತ್ತದೆ.

" ನಮುಕ್ಕಾರ್ ನಿಕರ್ '' ನಮ್ಮಂಥಾ ಭಾಗ್ಯಶಾಲಿಗಳ್ಯಾರಿದ್ದಾರೆಂದು ಹೇಳಿದುದರಿಂದ ಶ್ರೀಮನ್ನಾಥಮುನಿಗಳು ನಮಗೆ ಮಾಡಿರುವ ಉಪಕಾರಗಳು ಬಹು ಮಹತ್ತಾದವು ಎಂದು ತಾತ್ಪರ್ಯವು. ಅಂತಹ ಉಪಕಾರಗಳು ಯಾವುವೆಂದರೆ :—

1. ಶ್ರೀಮನ್ನಾಥಮುನಿಗಳು ನಮ್ಮಾಳ್ವಾರ್ರವರ 'ಆರಾಮುದೇ ಎಂಬ ತಿರುಕುಡಂದೆಯು ಸ್ವಾಮಿಯನ್ನು ಕುರಿತು ಹೇಳಿದ ತಿರುವಾಯ್‌ಮೊಳಿಯ ಅರ್ಥಸ್ವಾರಸ್ಯ ಪರಿಗ್ರಹಿಸಿದವರಾಗಿ, ಅವರ ಪೂರಾ ಗ್ರಂಥಗಳನ್ನು ಅಧಿಕರಿಸಬೇಕೆಂಬ ಸ್ಥಿರಸಂಕಲ್ಪವುಳ್ಳವರಾಗಿ, ಯಾರಿಂದಲೂ ಸಂಗ್ರಹಿಸಲು ಸಾಧ್ಯವಾಗದೆ, ಪರಾಂಕುಶದಾಸರೆಂಬುವರು ಹೇಳಿದಹಾಗೆ " ಕಣ್ಣಿನುಣ್ ಶಿರತ್ತಾಂಬನ್ನು ೧೨,೦೦೦ ಸಲ ಅವೃತ್ತಿಮಾಡಿ ನಮ್ಮಾಳ್ವಾರನ್ನು ಸಾಕ್ಷಾತ್ಕರಿಸಿ ಅವರಿಂದ ಆಳ್ವಾರ್ ತಿರುನಗರಿಯ ಹುಣುಸೇಮರದ ಕೆಳಗೇನೇ ದ್ರಾವಿಡ ಪ್ರಬಂಧಗಳ ಮಂತ್ರಾರ್ಥಗಳ ಸೂತ್ರಭಾಷ್ಯ ಸ್ವಾರಸ್ಯಾರ್ಥಗಳ ಉಪದೇಶವನ್ನು ಹೊಂದಿ ಅವುಗಳನ್ನು ಪ್ರಚುರಗೊಳಿಸಿದರು. ದ್ರಾವಿಡಪ್ರಬಂಧ ಪ್ರಚಾರಣೆಗೆ ಇವರೇ ಆದಿಯು.

2, ತಿರುಮಂಗೈಯಾಳ್ವಾರವರು ಶ್ರೀರಂಗದಲ್ಲಿ ಏರ್ಪಡಿಸಿದ್ದ ತಿರುವಧ್ಯಯನೋತ್ಸವವು ನಿಂತುಹೋಗಿದ್ದುದನ್ನು ಪುನಃ ಸಂಭ್ರಮದಿಂದ ನಡೆಯುವಹಾಗೆ ಶ್ರೀರಂಗದಲ್ಲೂ, ತಿರುಕ್ಕುಡಂದೆಯಲ್ಲೂ ಏರ್ಪಾಡುಮಾಡಿದರು.

3. ಕೀಳೈಯಹತ್ತಾಳ್ವಾನ್, ಮೇಳೈಯಹತ್ತಾಳ್ವಾನ್‌ರವರಿಗೆ

ದಿವ್ಯಪ್ರಬಂಧಗಳನ್ನು ದೇವಗಾನದಿಂದ ಹಾಡುವಹಾಗೆ ಶಿಕ್ಷಿಸಿ, ಅವರು ಅಧ್ಯಯನೋತ್ಸವಗಳಲ್ಲಿ ಅರೈಯರೆಂಬ ಹೆಸರಿನಿಂದ ಹಾಡುವಹಾಗೆ ಮಾಡಿದರು.

4. ಒಬ್ಬ ದಾಸಿಯಮೂಲಕ ಈ ದ್ರಾಮಿಡಪ್ರಬಂಧಗಾನವನ್ನು ಅಲ್ಲಿಯ ಚೋಳರಾಜನು ಸನ್ಮಾನಿಸುವಹಾಗೆ ಮಾಡಿ ಆ ರಾಜನು ಇವರಿಗೆ ಶಿಷ್ಯನಾಗಿ ದಿವ್ಯಪ್ರಬಂಧಾದಿಗಳು ಪ್ರಚಾರಕ್ಕೆ ಬರುವಹಾಗೆ ಮಾಡಿದರು.

ಈ ಕಾರಣಗಳಿಂದ ನಮ್ಮ ಆಚಾರ್ಯರವರಿಗೆ ಶ್ರೀಮನ್ನಾಥಮುನಿಗಳಲ್ಲಿ ಗೌರವವು ಹೆಚ್ಚು. ಆದುದರಿಂದ ನಾಥಮುನಿಗಳನ್ನು ತಮ್ಮ ಗ್ರಂಥಗಳಲ್ಲಿ ಕೊಂಡಾಡಿರುತ್ತಾರೆ.

ಈ ಗ್ರಂಥಕರ್ತರು ನಾಥಮುನಿಗಳವತಾರಸ್ಥಳವಾದ ವೀರನಾರಾಯಣಪುರಕ್ಕೆ ದಯಮಾಡಿಸಿ, ಅಲ್ಲಿ ಪ್ರತಿಷ್ಠಿತರಾದ ನಾಥಮುನಿಗಳ ಸೇವೆಯನ್ನು ಮಾಡಿ, ನಿರತಿಶಯಭಕ್ತಿಯನ್ನು ತೋರಲು, ಅದಕ್ಕೆ ನಾಥಮುನಿಗಳು ಪ್ರೀತರಾಗಿ ತಮಗೆ ನಮ್ಮಾಳ್ವಾರ್ರವರು ಹೇಗೆ ಅನುಗ್ರಹಿಸಿದರೋ ಹಾಗೆ ತಾವೂ ಈ ದೇಶಿಕವರ್ಯರಿಗೆ ಸಂಪ್ರದಾಯ ವಿಷಯಗಳನ್ನೆಲ್ಲಾ ವಿಶದವಾಗಿ ತಿಳಿಯುವಹಾಗೆ ಅನುಗ್ರಹಿಸಿ, ಬಹು ಜನಗಳು ಉಜ್ಜೀವಿಸುವಹಾಗೆ ಅನೇಕ ಅಮೋಘಗ್ರಂಥಗಳನ್ನು ರಚಿಸುವಿದೆಂಬದಾಗಿ ಸ್ವಾಮಿಹರಿಸಿದರೆಂದು ಅರ್ಚಕಮುಖೇನ ತಿಳಿದು, ಕೃತಕೃತ್ಯರಾಗಿ

ನಾಥೇನಮುನಿನಾತೇನ ಭವೇಯಂ ನಾಥವಾನಹಂ ।
ಯಸ್ಯನೈಗಮಿಕಂ ತತ್ವಂ ಹಸ್ತಾಮಲಕತಾಂಗತಂ ॥

ಎಂಬ ಶ್ಲೋಕದಿಂದ ಅವರನ್ನು ಸ್ತುತಿಸಿದರು. ಇದರ ಅಭಿಪ್ರಾಯವೇನೆಂದರೆ—ಯಾನ ನಾಥಮುನಿಗಳಿಗೆ ವೇದದಲ್ಲಿರುವ ಯಥಾರ್ಥತತ್ವವೆಲ್ಲವೂ ನಮ್ಮಾಳ್ವಾರವರಿಂದ ರಚಿಸಲ್ಪಟ್ಟ ದ್ರಾಮಿಡಪ್ರಬಂಧಗಳ ಮೂಲಕವಾಗಿ ಕರತಲಾಮಲಕಪ್ರಾಯವಾಗಿ ತಮಗೂ ಇತರರಿಗೂ ಸಹ ವೇದ್ಯವಾಯಿತೋ, ಅಂತಹ ನಾಥಮುನಿಗಳಿಂದ ತಾನು ಸ್ವಾಮಿಯುಳ್ಳವನಾದೆನು. ಅಂದರೆ ಲೋಕಗುರುವನ್ನು ಪಡೆಯುವೆನೆಂದು ಭಾವವು.

ಇಂತಹ ಉಪಕಾರವು ತಮಗೆ ದೊರೆತಿದ್ದರಿಂದ ತಮಗಿಂತಲೂ ಭಾಗ್ಯಶಾಲಿಗಳಾರು ಎಂದು ಹೇಳುತ್ತಾರೆ.

"ನಾನಿಲತ್ತೆ" ಎಂದು ಹೇಳಿರುವದರಿಂದ ಎಲ್ಲಾ ಭೂಭಾಗಗಳಲ್ಲೂ ತಮ್ಮಂತಹ ಧನ್ಯರಿಲ್ಲವೆಂದು ಭಾವವು. ಭೂಮಿಯನ್ನು ಐದಾಗಿ ಭಾಗಿಸಿರುತ್ತಾರೆ, ಪಾಳೈ, ಮರುತ್ತಂ, ಕೈತಲ್, ಕುರುಂಜಿ, ಮುಲ್ಲೈ ಎಂಬದಾಗಿ. ಆದರೆ ಪಾಳೈ ಎಂದರೆ ಮರುಭೂಮಿ, ಅಲ್ಲಿ ಯಾರೂ ಜನರು ವಾಸಮಾಡುವುದಿಲ್ಲವಾದುದರಿಂದ ಅದನ್ನು ಬಿಟ್ಟು ಇನ್ನು ನಾಲ್ಕು ಭಾಗಗಳನ್ನು ಮಾತ್ರ ಹೇಳಿದ್ದಾರೆಂದು ಊಹಿಸಬೇಕು.

ಈ ಪಾಶುರದ ಕೊನೇ ಮಂಗಳರೂಪವಾದ ವಾಕ್ಯವಾದ "ನಮುಕ್ಕಾರ್‌ನಿಕರ್‌ನಾನಿಲಿತ್ತೆ" ಎಂಬುದು, ಶ್ರೀಮನ್ನಾಥಮುನಿಗಳಿಗೆ ಮಾತ್ರವೇ ಅನ್ವಯಿಸದೆ, ಶ್ರೀ ಭಾಷ್ಯಕಾರರ್ ಮತ್ತು ಶ್ರೀ ಆಳವಂದಾರರಿಗೂ ಅನ್ವಯಿಸುವದರಲ್ಲಿ ತುಂಬಾ ಸ್ವಾರಸ್ಯವುಂಟು. "ಅರಣಸೂಲ್" ಪಾಶುರದಿಂದ ಶ್ರೀಭಾಷ್ಯಕಾರರನ್ನು ಕೊಂಡಾಡಿ "ಶಿಂತಿಯು ನೋಂತೀವಿನ್ನೈಯೆ" ಎಂದು ಹೇಳಿದುದರಿಂದ ತಮಗೆ ಮನಃಪಾರಿಶುದ್ಧ್ಯವೂ, "ನೀಳವಂದು" ಪಾಶುರದಿಂದ ಶ್ರೀಯಾಮುನಮುನಿಗಳನ್ನು ಕೊಂಡಾಡಿ "ಪಡಿಯೋಮಿನಿ ಅಲ್ವಳಕ್ಕೆ" ಎಂದು ಹೇಳಿರುವುದರಿಂದ ವಾಕ್ಪಾರಿಶುದ್ಧ್ಯವೂ, "ಕಾಳಂ ವಲಂಪುರಿ" ಎಂಬೀ ಪಾಶುರದಿಂದ ಶ್ರೀನಾಥಮುನಿಗಳನ್ನು ಕೊಂಡಾಡಿ "ತೊಳುದೆಳವ್ರೋಂ" ಎಂಬುವುದರಿಂದ ಕಾಯಪಾರಿಶುದ್ಧ್ಯವೂ, ಹೀಗೆ ಮುನಿತ್ರಯದಿಂದ ಮನೋವಾಕ್ಕಾಯ ಪರಿಶುದ್ಧತೆಯೂ ತಮಗೆ ಉಂಟಾಯಿತೆಂದು "ನಮುಕ್ಕಾರ್ ನಿಕರ್‌ನಾನಿಲತ್ತ" ಎಂದು ಮಂಗಳವನ್ನು ಹೇಳಿ ಗುರುಪರಂಪರಾಸಾರವನ್ನು ಮುಗಿಸಿರುತ್ತಾರೆ.

ಇತಿ ಕವಿತಾರ್ಕಿಕ ಸಿಂಹಸ್ಯ ಸರ್ವತಂತ್ರಸ್ವತಂತ್ರಸ್ಯ
ವೇದಾಂತಾಚಾರ್ಯಸ್ಯಕೃತಿಷು.

**ಗುರುಪರಂಪರಾ ಸಾರಸ್ಸಂಪೂರ್ಣಃ.**

ಶ್ರೀಮತೇನಿಗಮಾಂತಮಹಾದೇಶಿಕಾಯನಮಃ.